# ಮಕ್ಕಳ ಮಾತು

ಬರೆದವರು :

ಕರ್ಣಾಟಕ ಸಂಘದ ಸದಸ್ಯರು

ಸಂಪಾದಕರು :

ಜಿ. ಪಿ. ರಾಜರತ್ನಂ



ಕರ್ಣಾಟಕ ಸಂಘ
ಸೆಂಟ್ರಲ್ ಕಾಲೇಜ್, ಬೆಂಗಳೂರು

ಬೆಲೆ: ಒಂದು ರೂಪಾಯಿ

# ಮಕ್ಕಳ ಮಾತು

ಬರೆದವರು :

**ಕರ್ಣಾಟಕ ಸಂಘದ ಸದಸ್ಯರು**

ಸಂಪಾದಕ :

**ಜಿ. ಪಿ. ರಾಜರತ್ನಂ**





**ಕರ್ಣಾಟಕ ಸಂಘ**

**ಸೆಂಟ್ರಲ್ ಕಾಲೇಜ್, ಬೆಂಗಳೂರು**

**ಡಿಸೆಂಬರ್, ೧೯೫೩**

**“ಕೋಮಳಮುಕ್ಕುಮೆ ಸಹಜಮಿಲ್ಲದಾತನ ಕಬ್ಬಂ?”**
ಎಂದು ನಯಸೇನನೆಂಬ ಕನ್ನಡ ಕವಿ ಸವಾಲು ಹಾಕಿದ.

**ವಿದ್ಯಾರ್ಥಿಗಳು**
**ಏನು ಬರೆದರೆ ಸಹಜವಾಗಿರುತ್ತದೆ?**
**ಹೇಗೆ ಬರೆದರೆ ಕೋಮಲವಾಗಿರುತ್ತದೆ?**
**ಎಂಬುದನ್ನು ತಿಳಿಯಬಯಸುವವರು ಕೆಳಗಿನ ಪುಸ್ತಕಗಳನ್ನು ಸಾವಧಾನವಾಗಿ ಪರಿಶೀಲಿಸಿ.**

---

**೧. ನಮ್ಮನಮ್ಮವರು ಪುಟಗಳು ೧೯೨ ರೂ. 2/8**

ಪುಟ ೧-೧೦೦: ೧೯೩೯ರಲ್ಲಿ ಮೈಸೂರಿನ ಇಂಟರ್‌ಮೀಡಿಯೆಟ್ ಕಾಲೇಜಿನ ವಿದ್ಯಾರ್ಥಿಗಳಾಗಿದ್ದವರು ಬರೆದ ೪೫ ಲಘುಲೇಖನಗಳ ಸಂಕಲನ. ಉಪಯುಕ್ತವಾದ ಮುನ್ನುಡಿಯೊಡನೆ.

ಪುಟ ೧೦೧-೧೯೨: ೧೯೪೪ರಲ್ಲಿ ತುಮಕೂರು ಇಂಟರ್‌ಮೀಡಿಯೆಟ್ ಕಾಲೇಜಿನಲ್ಲಿ ವಿದ್ಯಾರ್ಥಿಗಳಾಗಿದ್ದವರು ಬರೆದ ೨೧ ವಿಚಾರಪರಿಪ್ಲುತವಾದ ಗಂಭೀರ ಲೇಖನಗಳು, ಕಾವ್ಯಾವಲೋಕನಗಳು, ಪ್ರಬಂಧಗಳು. ವಿದ್ಯಾರ್ಥಿಗಳ ವಿಚಾರವಿಲಾಸದ ವೈಖರಿಗೆ ಕೈಗನ್ನಡಿ.

**೨. ಬಾಲ ಸರಸ್ವತಿ ಪುಟಗಳು ೧೯೬ ರೂ. 2/8**

೧೯೫೩ರಲ್ಲಿ ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಗಳಾಗಿದ್ದವರು ಬರೆದ ೩೬ ಲೇಖನಗಳು: ಕತೆ, ಇಂಗ್ಲಿಷ್ ಸಾಹಿತ್ಯದ ರುಚಿ, ಸಂವಾದ ಕಲ್ಪನೆ, ಲಘುಪ್ರಬಂಧ, ಏಕಾಂಕ ನಾಟಕ ಇತ್ಯಾದಿ.

**೩. ಚಿನ್ನದ ದೋಸೆ ಪುಟಗಳು ೬೪ ಹನ್ನೆರಡಾಣೆ**

೧೯೫೩ರಲ್ಲಿ ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಗಳು ಸಂಗ್ರಹಿಸಿದ ೮ ಜಾನಪದ ಕತೆಗಳು. ಮಕ್ಕಳಿಗೆ ಕೊಬರಿ ಮಿಠಾಯಿಯ ಚಕ್ಕೆ.

# ಈ ಪುಸ್ತಕದ ಒಳಗೆ ಏನಿದೆ?

# ಲೇಖಕ ಸೂಚಿ



---

# ಉದ್ಧೃತ ಪದ್ಯಗಳ ಅಕಾರಾದಿ

# ನಮ್ಮ ಸಂಘದ ಸಂಪ್ರದಾಯ

ಸೆಂಟ್ರಲ್ ಕಾಲೆಜ್ ಕರ್ಣಾಟಕ ಸಂಘವು ಮುವ್ವತ್ತಾರು ವರ್ಷಗಳಿಂದ ಕೆಲಸಮಾಡುತ್ತ ಪರಿಣತವಾಗಿರುವ ಪ್ರೌಢ ಸಂಸ್ಥೆ. ಇದು ೧೯೧೮ರ ಆಗಸ್ಟ್ ತಿಂಗಳಿನಲ್ಲಿ ಆಗಿನ ವಿದ್ಯಾರ್ಥಿಗಳ ಬೆಂಬಲದಿಂದ, ಯಾವತ್ತೂ ಕಾಲದ ವಿದ್ಯಾರ್ಥಿಗಳಿಗಾಗಿ ಸ್ಥಾಪಿತವಾಯಿತು. ಉಪನ್ಯಾಸಗಳು, ವಾಚನಗಳು, ಕಂಠಪಾಠ ಅಭಿನಯ ಇತ್ಯಾದಿ ಸ್ಪರ್ಧೆಗಳು, ಸಾಹಿತಿಗಳಿಗೆ ಸನ್ಮಾನಗಳು, ವಿದ್ಯಾರ್ಥಿಗೋಷ್ಠಿಗಳು ಮುಂತಾದ ದಿನಚರಿಯ ಕಾರ್ಯಕಲಾಪಗಳನ್ನಲ್ಲದೆ ಈ ಸಂಘವು ಹದಿನಾಲ್ಕು ವರ್ಷಗಳ ಕಾಲ "ಪ್ರಬುದ್ಧ ಕರ್ಣಾಟಕ"ವನ್ನು ಪ್ರಕಟಿಸಿತು. (ಈಗ ಅದನ್ನು ಮೈಸೂರು ವಿಶ್ವವಿದ್ಯಾನಿಲಯದವರು ನಡಸುತ್ತಿದ್ದಾರೆ.) ಅದೇ "ಪ್ರಬುದ್ಧ ಕರ್ಣಾಟಕ"ದಿಂದ ಅಪೂರ್ವವಾದ ಪುಸ್ತಕಗಳನ್ನು ಸೃಷ್ಟಿಸಿ, ನಾಡಿನ ಪುಸ್ತಕ ಪ್ರಕಾಶನಕ್ಕೆ ತಾನೂ ಮೇಲುಪಂಕ್ತಿ ಹಾಕಿತು. ೧೯೪೨, ೧೯೪೭ ಇಂತಹ ದೇಶಕ್ಷೋಭೆಯ ದಿವಸಗಳಲ್ಲಿ ಕೂಡ, ಈ ಸಂಘ ನಿಲ್ಲದೆ, ತನ್ನ ಕರ್ತವ್ಯಗಳನ್ನು ನಿರ್ವಹಿಸಿಕೊಂಡು ಬಂದಿದೆ.

ಸೆಂಟ್ರಲ್ ಕಾಲೆಜ್ ಕರ್ಣಾಟಕ ಸಂಘವನ್ನು ಸ್ಥಾಪಿಸಿದವರು—ಆಗ ಅಲ್ಲಿ ಕನ್ನಡ ಅಧ್ಯಾಪಕರಾಗಿದ್ದ (ಈಗ ವಿಶ್ರಾಂತ ಕನ್ನಡ ಪ್ರಾಧ್ಯಾಪಕರಾಗಿರುವ) ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರೀ ಅವರು. ಇವರು ನೆಟ್ಟು, ಚಿಗುರಿಸಿ, ಮರವಾಗಿಮಾಡಿ, ಹೂವು ಹಣ್ಣುಗಳನ್ನು ಬಿಡಿಸಿ, ಈಗ ನಮ್ಮ ಕೈಗೆ ಸಮರ್ಥವಾಗಿ ಬಂದಿರುವ ಸಂಘದ ಸಂಪ್ರದಾಯವನ್ನು ತಿಳಿಯಬೇಕಾದರೆ, ಸಂಘದ ರಜತೋತ್ಸವದ ದಿವಸ (೧೬-೧-೧೯೪೪) ಅಧ್ಯಕ್ಷಪೀಠದಿಂದ ಶ್ರೀ ಡಿ. ವಿ. ಜಿ. ಅವರು ಮಾಡಿದ ಭಾಷಣದ ಸಾರಾಂಶವನ್ನು ಅವಲೋಕಿಸಬಹುದು. ಆ ದಿವಸ ಅವರು ಹೀಗೆ ಹೇಳಿದರು:

" ಈಗ ನಮ್ಮ ದೇಶದಲ್ಲಿ ಕರ್ಣಾಟಕ ಸಂಘವೆಂಬ ಹೆಸರಿನ ಸಂಸ್ಥೆಗಳು ಹತ್ತಾರಿವೆ. ಅಂಥವು ಇನ್ನೂ ಹೊಸ ಹೊಸವು ಹುಟ್ಟುತ್ತ ಕನ್ನಡ ನಾಡಿನಲ್ಲೆಲ್ಲಾ ವ್ಯಾಪಿಸುತ್ತಿವೆ. ನನಗೆ ತಿಳಿದಿರುವ ಮಟ್ಟಿಗೆ ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘವೇ ಅವುಗಳಲ್ಲೆಲ್ಲಾ ಮೊದಲನೆಯದು. ವಯೋ

ದೃಷ್ಟಿಯಿಂದ ಇದು ಹಿರಿಯದಾಗಿರುವಂತೆ ಕಾರ್ಯದೃಷ್ಟಿಯಿಂದ ಇದು ಎಲ್ಲ ಸಂಘಗಳಿಗೂ ಇದುವರೆಗೂ ಮಾರ್ಗದರ್ಶಿಯಾಗಿ ನಡೆದಿದೆಯೆಂದು ಹೇಳಿದರೆ ಆ ಮಾತನ್ನು ಯಾರೂ ನಿಷೇಧಿಸಲಾರರೆಂದು ನನಗೆ ಭರವಸೆ ಇದೆ.

"ಈ ಸಂಘ ಹುಟ್ಟಿದಾಗಿನ ವಿದ್ಯಮಾನಗಳು ನನಗೆ ಚೆನ್ನಾಗಿ ಜ್ಞಾಪಕದಲ್ಲಿವೆ. ಆಗ್ಗೆ ಸಾಹಿತ್ಯ ಪರಿಷತ್ತು ಹುಟ್ಟಿ ೩-೪ ವರ್ಷವಾಗಿತ್ತು. ಅದು ನಾಡ ಹಿರಿಯರು ಮಾಡಿದ್ದ ಸಂಸ್ಥೆ. ಆದರೆ ಕರ್ಣಾಟಕದ ಪುನರುಜ್ಜೀವನ ಸಂರಂಭ ಬಹು ವಿಸ್ತಾರವಾದದ್ದು; ಬಹು ಮಹತ್ತ್ವದ್ದು. ಅದಕ್ಕೆ ಪ್ರೌಢ ಪರಿಣತ ಜನರ ಶ್ರದ್ಧೆಯ ಪ್ರಯತ್ನ ಅವಶ್ಯವಾದಂತೆಯೇ ತರುಣ ಜನರ ಉತ್ಸಾಹ ಸಹಕಾರವೂ ಅವಶ್ಯವೆಂಬುದನ್ನು ಕಂಡುಕೊಂಡವರು ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳು, ಮತ್ತು ಅವರ ಸ್ನೇಹಿತರು ಕೆಲವರು . . . . . ಅವರು ನೆಟ್ಟ ಸಸಿ ಈಗ ಬೆಳೆದು, ಹೆಮ್ಮರವಾಗಿ ಹರಡಿ, ಕೊಂಬೆ ಬಿಳಲುಗಳನ್ನು ಹಬ್ಬಿಸಿದೆ. ಅದರ ಬಿತ್ತದಿಂದ ಹತ್ತಾರು ಬೇರೆ ಸಸಿಗಳು ಮೊಳೆತು ಬೆಳೆಯುತ್ತಿವೆ. ಇದನ್ನು ನೋಡುವ ಅವರ ಸಂತೋಷ ಅತಿಶಯವಾದ ಸಂತೋಷ, ಕೃತಾರ್ಥತೆಯ ಸಂತೋಷ.

"ಒಂದು ಸಂಸ್ಥೆಯ ಇಪ್ಪತ್ತೈದು ವರ್ಷಗಳ ಬೆಳವಣಿಗೆ ನಮ್ಮ ದೇಶಕ್ಕೆ ಸಾಮಾನ್ಯ ಸಂಗತಿಯಲ್ಲ. ನಮ್ಮ ಉತ್ಸಾಹಗಳು ಸಾಮಾನ್ಯವಾಗಿ ಅಲ್ಪಾಯುಷ್ಯದವು. ಇಂಥ ಸಂಘದ ಸ್ಥಾಪನೆಯ ದಿವಸವೇ ನಮ್ಮಲ್ಲಿರುವ ಸಂಭ್ರಮ ಶಕ್ತಿಯೆಲ್ಲ ವೆಚ್ಚವಾಗಿ ಹೋಗುತ್ತದೆ. ನಮ್ಮ ಸಂಘದ ಸಂಸ್ಥಾಪಕರೂ ಅದರ ಮೊದಲನೆಯ ಅಧ್ಯಕ್ಷರೂ ಆಗಿದ್ದ ಪುಣ್ಯಶ್ಲೋಕರಾದ ಬೆಳ್ಳಾವೆ ವೆಂಕಟ ನಾರಣಪ್ಪನವರು ಅನೇಕ ಸಂಘ ಸಂಸ್ಥೆಗಳ ಅನುಭವವಿದ್ದವರು. ಅವರು "ಆರಂಭಶೂರಾಃ ಖಲು ದಾಕ್ಷಿಣಾತ್ಯಾಃ" ಎಂದು ನಮಗೆ ಚುಚ್ಚಿ ಚುಚ್ಚಿ ಹೇಳದೆ ಇದ್ದ ವಾರ ವರ್ಷದ ೫೨ ವಾರಗಳಲ್ಲಿ ಒಂದಾದರೂ ಇರಲಿಲ್ಲ; ವರ್ಷ ವರ್ಷವೂ ಹಾಗೆಯೇ. ಇಂಥಾದ್ದರಲ್ಲಿ ಈ ಸಂಘ ಇಷ್ಟು ದೀರ್ಘಕಾಲ ಉಳಿದಿರುವುದು ಮಾತ್ರವೇ ಅಲ್ಲದೆ, ತಕ್ಕಷ್ಟು ಚಟುವಟಿಕೆಯಿಂದ ಕೆಲಸ ಮಾಡಿ ತನ್ನ ಉದ್ದೇಶಗಳನ್ನು ಸಾಧಿಸಿ ಪ್ರಭಾವಶಾಲಿಯೆನಿಸಿದೆ.

"ಕೃಷ್ಣಶಾಸ್ತ್ರಿಗಳು ಈ ಸಂಘದ ಸ್ಥಾಪನೆಗೂ ಇದರ ಚರಮೂರ್ತಿಯಾದ 'ಪ್ರಬುದ್ಧ ಕರ್ಣಾಟಕ'ದ ಪ್ರಕಟನೆಗೂ ಕೈಹಚ್ಚಿದಾಗ ಅವರಿಗೆ ದೊರೆತ

ಪ್ರೋತ್ಸಾಹ ಯಥೇಷ್ಟವಾಗೇನೂ ಇರಲಿಲ್ಲ. ಶ್ರೀ ಎನ್. ಎಸ್. ಸುಬ್ಬರಾಯರವರು ಆಗ ಈ ವಿಷಯದಲ್ಲಿ ಅಷ್ಟೇನೂ ಆಶಾವಾದಿಗಳಾಗಿರಲಿಲ್ಲವೆಂದು ನಾನು ಕೇಳಿದ್ದೇನೆ. ನಾನು ಕೂಡ ಶಾಸ್ತ್ರಿಗಳಿಗೆ ಹೆಚ್ಚು ಭರವಸೆ ಕೊಟ್ಟ ಹಾಗೆ ಜ್ಞಾಪಕವಿಲ್ಲ. ಆಗ್ಗೆ ವೆಂಕಟನಾರಣಪ್ಪನವರೂ ನಾನೂ ಒಂದೆರಡು ಇಂಥಾ ಪ್ರಶ್ನೆಗಳಲ್ಲಿ ಕೈಸುಟ್ಟುಕೊಂಡಿದ್ದೆವು. ಆದರೆ ಕೃಷ್ಣಶಾಸ್ತ್ರಿಗಳು ತಮ್ಮ ವಿದ್ಯಾರ್ಥಿಗಳ ಮಹಿಮೆಯನ್ನು ನಮಗಿಂತ ಚೆನ್ನಾಗಿ ಕಂಡುಕೊಂಡಿದ್ದರು. ನಾಲ್ಕಾರು ಮಂದಿ ಆಗಿನ ವಿದ್ಯಾರ್ಥಿಗಳು ಮಾಡಿದ ಕೆಲಸವನ್ನು ನಾನು ಕಣ್ಣಾರ ನೋಡಿದ್ದೇನೆ. ಶ್ರೀ ಸಿ. ಕೆ. ವೆಂಕಟರಾಮಯ್ಯನವರು 'ಪ್ರಬುದ್ಧ ಕರ್ಣಾಟಕ'ದ ಮೊದಮೊದಲನೆಯ ಸಂಚಿಕೆಗಳಲ್ಲಿ ಬರೆದಿದ್ದುದು ನನಗೆ ಜ್ಞಾಪಕವಿದೆ. ಶ್ರೀ ಎಸ್. ವಿ. ರಂಗಣ್ಣನವರ ಆಗಿನ ಪ್ರಬಂಧಗಳನ್ನು ನಾನು ಮರೆತಿಲ್ಲ. ಈಗ ಸಿಕಂದರಾಬಾದಿನಲ್ಲಿರುವ ಶ್ರೀ ಸಿ.ಎನ್. ರಂಗಾಚಾರ್ಯರವರು ಶ್ರೀ ಸರ್ ಎಂ. ವಿಶ್ವೇಶ್ವರಯ್ಯನವರ ವರ್ಷವರ್ಧಂತಿಗಾಗಿ ಜನೋಪಕಾರಿ ದೊಡ್ಡಣ್ಣಶೆಟ್ಟರವರ ಸಭಾಭವನದಲ್ಲಿ ಉತ್ಸವ ಸಭೆ ಸೇರಿಸಿದ್ದದ್ದೂ, ಆ ಪ್ರಚಂಡ ಸಭೆಯಲ್ಲಿ ದಿವಂಗತ ಕೆ. ಎಚ್. ರಾಮಯ್ಯನವರು ಭಾಷಣ ಮಾಡುತ್ತ, ಶ್ರೀ ವಿಶ್ವೇಶ್ವರಯ್ಯನವರನ್ನು "ಫಿಲಡೆಲ್ಫಿಯ" ರೆಯಿಲ್ವೇ ಎಂಜಿನ್ ಯಂತ್ರಕ್ಕೂ ಮೈಸೂರು ಜನವನ್ನು ಎಮ್ಮೆ ಕೋಣದ ಒಡ್ಡ ಬಂಡಿಗೂ ಹೋಲಿಸಿದ್ದೂ, ಆ ಎಂಜಿನ್ ವೇಗವು ಆ ಹಳೆಯ ಬಂಡಿಗೆ ತಗುಲಿದಾಗ ಆದ ಡಕ್ಕಾಮುಕ್ಕಿಯನ್ನು ಅಂಗಾನುಕರಣದೊಡನೆ ವರ್ಣಿಸಿದ್ದೂ, ಆಗ ನಾವೆಲ್ಲ ಹೊಟ್ಟೆ ಬಿರಿಯ ನಕ್ಕದ್ದೂ ನನಗೆ ಚೆನ್ನಾಗಿ ಜ್ಞಾಪಕವಿದೆ. ಶ್ರೀ ನಿಟ್ಟೂರು ಶ್ರೀನಿವಾಸರಾಯರು "ಪ್ರಬುದ್ಧ ಕರ್ಣಾಟಕ"ದ ಕಟ್ಟುಗಳನ್ನು ಬೈಸಿಕಲ್ಲಿಗೆ ಕಟ್ಟಿಕೊಂಡು ಭೂಮ್ಯಾಕಾಶಗಳಲ್ಲೆಲ್ಲ ಸುತ್ತಿ ಸುತ್ತಿ ಚಂದಾ ವಸೂಲು ಮಾಡಿ ತಂದದ್ದೂ ಜ್ಞಾಪಕವಿದೆ. ಶ್ರೀ ಡಿ. ಗುರುರಾಯರ ಭಾರತವಾಚನದ ಕುತೂಹಲವೂ ಜ್ಞಾಪಕದಲ್ಲಿದೆ. ಶ್ರೀ ಎಸ್. ಡಿ. ಗಣೇಶರಾಯರು, ಶ್ರೀ ಭೂಪಾಲಂ ಚಂದ್ರಶೇಖರಯ್ಯನವರು, ಡಾಕ್ಟರ್ ಪಿ. ಕೃಷ್ಣರಾಯರು, ಶ್ರೀ ಟಿ. ಗೋವಿಂದರಾಯರು, ಶ್ರೀ ಎಂ. ನರಸಿಂಹಮೂರ್ತಿಗಳವರು—ಇನ್ನೂ ಅನೇಕ ಮಂದಿ ಕಾರ್ಯದರ್ಶಿಗಳೂ ಕಾರ್ಯಕರ್ತರೂ ಮಾಡಿದ ಸೇವೆ ಸಾಹಸಗಳು ನನ್ನ ನೆನಪಿನಲ್ಲಿವೆ. ಈಗ ಈ ಕಾಲೇಜಿನಲ್ಲಿರುವ ವಿದ್ಯಾರ್ಥಿಗಳು ಉತ್ಸಾಹದಲ್ಲಿಯೂ ಕಾರ್ಯನಿಷ್ಠೆಯಲ್ಲಿಯೂ

ಆ ಪೂರ್ವಿಕರ ಮಟ್ಟವನ್ನು ಇಳಿಸದೆ ಉಳಿಸಿಕೊಂಡಿದ್ದಾರೆಂದು ನಾನು ನಂಬಿದ್ದೇನೆ. 'ಆಗಿನ ಕಾಲಸ್ಥಿತಿಗಳು ಅನುಕೂಲವಾದವು; ಆಗಿನಂತೆ ವಿದ್ಯಾರ್ಥಿಗಳು ಕೂಟ ಕಟ್ಟುವುದು ಈಗ ಸಾಧ್ಯವಿಲ್ಲ'—ಎಂದು ಯಾರಾದರೂ ಹೇಳುವುದಾದರೆ ನಾನು ಒಪ್ಪಿಕೊಳ್ಳುವವನಲ್ಲ. ಈಗ ಉಪಾಹಾರದ ಅಂಗಡಿಗಳಲ್ಲಿ ಬೆಲೆ ಮಿತಿಮೀರಿ ಹೋಗಿದೆ ಎಂದು ವಾದಿಸಿದರೂ ಪ್ರಯೋಜನವಿಲ್ಲ. ಆಗಿನವರಿಗೂ ಅನನುಕೂಲತೆಗಳು ಎಷ್ಟೋ ಇರಲೇ ಇದ್ದವು. ಆಗ ಯೂನಿವರ್ಸಿಟಿ ಯೂನಿಯನ್ನೂ ಅದರ ರೆಸ್ಟುರೆಂಟೂ ಇರಲಿಲ್ಲ. ಆದರೂ ಹೇಗೋ ಅವರು ಕಷ್ಟಗಳನ್ನು ನಿರ್ವಹಿಸಿ, ಕರ್ಣಾಟಕ ಸಂಘದ ಹೆಸರಿನ ಗೋಷ್ಠೀ ಸಮಾರಂಭಗಳನ್ನು ಉತ್ಸಾಹದೊಡನೆ ನಡಸಿಕೊಂಡು ಬಂದರು. ಇಂದಿನ ವಿದ್ಯಾರ್ಥಿಗಳು ಹಿಂದಿನವರ ಆ ದಿವ್ಯೋದಾಹರಣೆಯನ್ನು ಸರ್ವದಾ ಗಮನದಲ್ಲಿರಿಸಿ, ಅಭಿಮಾನದಿಂದ ಈ ಸಂಘದ ಪುರೋವೃದ್ಧಿಯನ್ನು ಸಾಧಿಸಿಯಾರೆಂದು ನಾನು ನೆಚ್ಚಿಗೆ ಇಟ್ಟುಕೊಂಡಿದ್ದೇನೆ."

[ಸಾಹಿತ್ಯಶಕ್ತಿ—ಪುಟ ೧೨೪ ರಿಂದ ೧೨೭.]

ಈಗಲೂ ಸಂಘವು ತನ್ನ ಸದಸ್ಯರಲ್ಲಿ ವಿಜ್ಞಾಪಿಸಿಕೊಳ್ಳುವುದಾದರೂ ಇಷ್ಟೆ: ಹಿಂದಿನವರ ಆ ದಿವ್ಯೋದಾಹರಣೆಯನ್ನು ಸರ್ವದಾ ಗಮನದಲ್ಲಿರಿಸಿ, ಅಭಿಮಾನದಿಂದ ಈ ಸಂಘದ ಪುರೋಭಿವೃದ್ಧಿಯನ್ನು ಸಾಧಿಸಿರಿ.

೧೬-೧೨-೫೪ **ಜಿ. ಪಿ. ರಾಜರತ್ನಂ**

ಸೆಂಟ್ರಲ್ ಕಾಲೇಜ್ ಸಂಘದ ಪರವಾಗಿ

[ಸೆಂಟ್ರಲ್ ಕಾಲೇಜ್ ಕರ್ಣಾಟಕ ಸಂಘದ ಸ್ಥಾಪನೆಯ ಕತೆಯನ್ನು ವಿವರವಾಗಿ ತಿಳಿಯಲು ಬಯಸುವವರು **ಶ್ರೀ ಎ. ಆರ್. ಕೃಷ್ಣಶಾಸ್ತ್ರೀ ಅವರ "ಭಾಷಣಗಳು ಮತ್ತು ಲೇಖನಗಳು—ಸಂಪುಟ ೨"** ಅದರಲ್ಲಿ ಮೊದಲನೆಯ ಲೇಖನವನ್ನು ಅವಲೋಕಿಸಿ.]

# ಅಭಿನಂದನ

ಶ್ರೀವರ್ರ್ಣ ರಾಜರತ್ನಂ ಅವರಲ್ಲಿ ವಿಜ್ಞಾಪನೆಗಳು:—

ತಾವು ವಿಶ್ವಾಸದಿಂದ ತಂದುಕೊಟ್ಟ 'ಬಾಲಸರಸ್ವತಿ'ಯನ್ನು ಓದಿ ಸಂತೋಷಪಟ್ಟೆ. ಅದರಲ್ಲಿರುವ ತರುಣಲೇಖಕರಿಗೂ, ಅದರ ಸಂಪಾದಕರಿಗೂ ನನ್ನ ಅಭಿನಂದನಗಳು!

ಸೆಂಟ್ರಲ್ ಕಾಲೇಜು ವಿಜ್ಞಾನಸಂಸ್ಥೆಯಾದರೂ ಅದರ ವಿದ್ಯಾರ್ಥಿಗಳ ಸಾಹಿತ್ಯಾಭಿಮಾನವು ಹಿಂದಿನಿಂದಲೂ ಪ್ರಸಿದ್ಧವಾದದ್ದೇಯೆ. ಇಷ್ಟು ದೊಡ್ಡ ಕಾಲೇಜಿಗೆ ಲೇಖಕರ ಸಂಖ್ಯೆ ತುಂಬ ಚಿಕ್ಕದೆಂದು ನಿಮ್ಮ ಮನಸ್ಸಿಗೆ ಸಂಕೋಚವಿರಬಹುದು; ಆದರೆ, ಯಾವಾಗಲೂ ಮರದಲ್ಲಿ ಎಲೆಗಳೇ ಹೆಚ್ಚು; ಹಣ್ಣುಗಳು ಕಡಮೆ.

ನೂರರಲ್ಲಿ ತೊಂಬತ್ತು ಜನ ವಿದ್ಯಾರ್ಥಿಗಳಿಗೆ ಕಾಲೇಜು ಬಿಟ್ಟಮೇಲೆ ಅವರು ಕಷ್ಟಪಟ್ಟು ವ್ಯಾಸಂಗ ಮಾಡಿದ ಐಚ್ಛಿಕ ವಿಷಯಗಳ ಉಪಯೋಗವು ಇಲ್ಲದೆ ಹೋಗುತ್ತದೆ. ಆದರೆ ಕನ್ನಡ ಬೇಕಾಗುತ್ತದೆ. ಅದನ್ನು ಮೊದಲು ಅಸಡ್ಡೆಮಾಡಿದವರು ಆಮೇಲೆ ವ್ಯಥೆಪಡುವಂತಾಗುತ್ತದೆ. ಇಂಗ್ಲಿಷನ್ನು ಉಪಯೋಗಿಸಿಕೊಂಡ ಹಾಗೆಲ್ಲಾ ಇದೆ. ಎಲ್ಲರೂ ಪರದೇಶಗಳಿಗೂ ಪರಸಂಸ್ಥಾನಗಳಿಗೂ ಹೋಗಿ ಅನ್ಯಭಾಷೆಗಳನ್ನು ಉಪಯೋಗಿಸುವುದೂ ಅಷ್ಟರಲ್ಲಿಯೇ ಇರುತ್ತದೆ. ಅಲ್ಲದೆ ಪರಭಾಷೆ ಪರಭಾಷೆಯೇ! ನಾವು ಅದನ್ನು ನಾದಿ ಹದ ಮಾಡಿಕೊಳ್ಳಲಾರೆವು. ಅದರಲ್ಲಿ ಬರೆದು ಹೆಸರು ಗಳಿಸಲಾರೆವು. ನಾವೂ ನಮ್ಮ ಮಕ್ಕಳೂ ಬದುಕಬೇಕಾದರೆ ನಮ್ಮ ತಾಯ್ನುಡಿಯಿಂದ. ನಾವು ಅದನ್ನು ಸಾಕದೆಹೋದರೆ ಮತ್ತಾರೂ ಅದನ್ನು ಸಾಕುವುದಿಲ್ಲ. ಇತರರು ಸಾಕುವುದು ಸಾಧ್ಯವೂ ಅಲ್ಲ. ಅವರು ಸಾಕುವ ಮಾತಾಡಿದರೂ, ಅದು ತುದಿನಾಲಗೆಯ ಮಾತಾಗಿದ್ದು, ಅದರ ಹಿಂದೆ ಮಲತಾಯಿಯ ಭಾವವಿರುವುದು ಸ್ವಾಭಾವಿಕವೇಯೆ. ಪ್ರಬಲ ಭಾಷೆಗಳ ಎರಡಕ್ಷರ ಬಲ್ಲವರು ಇಂದಿಗೂ ಅವುಗಳ ಕಡೆಗೆ ವಾಲುವುದು ತಪ್ಪಿಲ್ಲ; ತನಗೆ ಒಲಿದುಬಂದ ಭಾಷೆಗೆ ತಾನು ಒಲಿಯಲಿ; ಬೇಡವೆನ್ನುವುದಿಲ್ಲ. ಆದರೆ ತಾಯ್ನುಡಿಯನ್ನು ತಿರಸ್ಕಾರದಿಂದ ಕಾಣಲೇಕೆ? ತಾಯಿ ಬಡವಳಾದರೆ ಅವಳನ್ನು ನಿಕೃಷ್ಟಮಾಡಿ ಯಾವ ನರಕಕ್ಕೆ ಹೋಗ

ಬೇಕು? ನಮ್ಮ ಹೊಟ್ಟೆ ಬಟ್ಟೆಗಳನ್ನಾದರೂ ಕಟ್ಟಿ ಅವಳನ್ನು ರಕ್ಷಿಸಿ ಧೃಷ್ಟ ಪುಷ್ಟಳನ್ನಾಗಿಮಾಡುವುದು ನಮ್ಮ ಧರ್ಮ. ಇಂಗ್ಲಿಷ್ ಸಾಹಿತ್ಯದಲ್ಲಿ ಅದರ ಆದಿಕವಿ ಛಾಸರ್ ಹುಟ್ಟುವ ಕಾಲಕ್ಕೆ ಸಂಸ್ಕೃತ ಸಾಹಿತ್ಯದ ವ್ಯಾಸ ವಾಲ್ಮೀಕಿಗಳೂ ಭಾಸ ಕಾಳಿದಾಸರೂ ಕೀರ್ತಿಶೇಷರಾಗಿ ಸಾವಿರ ವರ್ಷಗಳ ಮೇಲಾಗಿದ್ದುವು. ಆಗ ಸಂಸ್ಕೃತ ಸಾಹಿತ್ಯವೂ ಇಂಗ್ಲಿಷನ್ನು ತುಚ್ಛೀಕರಿಸಬಹುದಾಗಿತ್ತು. ಆದರೆ ಇಂದು? ಅದರಲ್ಲಿ ಪ್ರಥಮಶ್ರೇಣಿಯ ಕವಿ ಪರಂಪರೆಯು ಹುಟ್ಟಿ ಆ ಸಾಹಿತ್ಯವನ್ನು ಅಮರವಾಗಿ, ವಿಶ್ವವ್ಯಾಪಿಯಾಗಿ, ಮಾಡಿದೆ. ಸಂಸ್ಕೃತ ನಿಂತಲ್ಲಿ ನಿಂತಿದೆ. ಈಗ್ಗೆ ಒಂದು ಸಾವಿರ ವರ್ಷಗಳ ಕೆಳಗೆ ಕನ್ನಡ ಸಾಹಿತ್ಯ—ಪಂಪ ರನ್ನರ ಕಾಲದ ಸಾಹಿತ್ಯ—ಅಂದಿನ ಮತ್ತಾವುದಾದರೂ ಸಾಹಿತ್ಯಕ್ಕೆ ತಲೆಬಾಗಿಸಬೇಕಾಗಿತ್ತೇ? ತಮಿಳನ್ನು ಬಿಟ್ಟರೆ ಭಾರತೀಯ ದೇಶ ಭಾಷೆಗಳಲ್ಲಿ ಉತ್ತಮ ಕಾವ್ಯವೆನ್ನಿಸಿಕೊಳ್ಳಬಹುದಾದ ಗ್ರಂಥವೇ ಆಗ ಇನ್ನೂ ಹುಟ್ಟಿರಲಿಲ್ಲ. ಇಂದೂ, ಕನ್ನಡ ಸಾಹಿತ್ಯ—ಆಧುನಿಕ ಕನ್ನಡ ಸಾಹಿತ್ಯ—ಯಾವ ಆಧುನಿಕ ಭಾರತೀಯ ಸಾಹಿತ್ಯದ ಮುಂದೂ ಸಂಕೋಚ ಪಟ್ಟುಕೊಂಡು ನಿಲ್ಲಬೇಕಾಗಿಲ್ಲ. ಇದು ನಾನು ಅಭಿಮಾನದಿಂದ ಆಡುವ ಮಾತಲ್ಲ; ಅನುಭವದಿಂದ ಆಡುವ ಮಾತು. ಆದರೆ ಹಲವು ಕಾರಣಗಳಿಂದ ಕನ್ನಡವನ್ನು, ಕನ್ನಡವಾಡುವವರನ್ನು, ಬರೆಯುವವರನ್ನು, ಓದುವವರನ್ನು, ಓದಿಸುವವರನ್ನು ಮಟುಕಿ ಮಟುಕಿ ಅವರಲ್ಲಿ ಒಂದು ಕೀಳುಭಾವನೆ ಉಂಟಾಗುವಂತೆ ಆಗಿದೆ. ವಸ್ತುಸ್ಥಿತಿ ಏನಾದರೂ ಇರಲಿ, ಬದುಕಿದ್ದರೆ ಭಾಗ್ಯವನ್ನು ನೋಡೇವು! ಆದ್ದರಿಂದ ಕನ್ನಡ ಸದ್ಯಕ್ಕೆ ಬದುಕಿರುವಂತೆ ನೋಡಿಕೊಳ್ಳಬೇಕು. ಅದು ಕನ್ನಡ ವಿದ್ಯಾರ್ಥಿಗಳ ಕರ್ತವ್ಯ, ಕರ್ಣಾಟಕ ಸಂಘಗಳ ಕರ್ತವ್ಯ. ವಿದ್ಯಾರ್ಥಿಗಳಿಂದಲೇ ಸಂಘ. ಇಂದು ವಿದ್ಯಾರ್ಥಿಗಳಾಗಿರುವವರು ಮುಂದೆ ಸಾರ್ವಜನಿಕರಾಗಿ, ಸರ್ಕಾರದ ಅಧಿಕಾರಿಗಳಾಗಿ, ದೇಶನಾಯಕರಾಗಿ, ಕನ್ನಡದ ಬೆಂಬಲಕ್ಕೆ ನಿಂತರೆ, ಅದು ಮುಂದಕ್ಕೆ ಬರಲಾರದೇ?

'ಬಾಲಸರಸ್ವತಿ'ಯು ಒಂದು ಶುಭ ಚಿಹ್ನೆ. ಈ ವರ್ಷ ಕರ್ಣಾಟಕ ಸಂಘವು ಪ್ರಕಟಿಸಿದ ಐದು ಗ್ರಂಥಗಳನ್ನು ಓದಿದಾಗ ನನಗೆ ಅದು ಪುನರುಜ್ಜೀವನಗೊಂಡು, ಅದರ ಪಂಚಪ್ರಾಣಗಳು ಚಿಗುರಿದುವೆನ್ನಿಸಿತು. ಕರ್ಣಾಟಕ ಸಂಘ ಹುಟ್ಟಿದಂದಿನಿಂದ ಅದರ ಏಳುಬೀಳುಗಳನ್ನು ನೋಡುತ್ತಿರುವ ನನ್ನ

ಮನಸ್ಸಿಗೆ ಅಮೃತವೆರೆದಂತಾಯಿತು. ಒಬ್ಬ ವ್ಯಕ್ತಿಯ ಸಂತೋಷವಿಷಾದಗಳು ಮುಖ್ಯವಲ್ಲ; ವ್ಯಕ್ತಿಗಿಂತ ಸಂಸ್ಥೆ ದೊಡ್ಡದು. ಈ ಸಂಸ್ಥೆ, ಮುವ್ವತ್ತೈದು ವರ್ಷಗಳಿಂದ ನಡೆದುಬಂದಿರುವ ಸಂಸ್ಥೆ; ಇಂಥ ಸಂಸ್ಥೆ ಉಳಿಯಬೇಕು, ಶಕ್ತಿ ಗಳಿಸಬೇಕು; ಅದರ ಸತ್ಸಂಪ್ರದಾಯಗಳನ್ನು ನಡಸಿಕೊಂಡು ಬರಬೇಕು. ಸದಾ ಹಕ್ಕು ಬಾಧ್ಯತೆಗಳಿಗಾಗಿಯೇ ಹೋರಾಡುತ್ತಿರಬಾರದು. ಈ ಕಾಲೇಜಿನ ಕರ್ಣಾಟಕ ಸಂಘವು ರಾಜಕೀಯ ಕ್ರಮವನ್ನು ಅನುಸರಿಸಿ ಚುನಾವಣೆಯ ಗೊಂದಲಗಳಿಗೆ ಅವಕಾಶ ಕೊಡದಿರುವುದರಿಂದ ಅದು ಅಲ್ಪಸ್ವಲ್ಪವಾದರೂ ತಿರುಳುಳ್ಳ ಕೆಲಸಮಾಡಿದೆ. ನಾನು ನಿಮ್ಮ ಹುಡುಗರಿಗೆ ಹೇಳುವುದು— 'ಮುಂದೆಯೂ ಹೀಗೆ ಆಚಾರ್ಯದೇವೋ ಭವ ಎಂಬ ಪ್ರಾಚೀನ ಸೂತ್ರವನ್ನು ಪಾಲಿಸಿಕೊಂಡು ಬನ್ನಿ; ಅದರಿಂದ ಕ್ಷೇಮ, ಶ್ರೇಯಸ್ಸು.' ಹುಡುಗರ ಯೋಗ ಕ್ಷೇಮದ ಚಿಂತನೆ, ತಂದೆತಾಯಿಗಳನ್ನು ಬಿಟ್ಟರೆ, ಉಪಾಧ್ಯಾಯನಿಗಿರುವಷ್ಟು ಮತ್ತಾರಿಗೂ ಇರುವುದಿಲ್ಲ. ಹುಡುಗರು ತಪ್ಪುದಾರಿಗೆ ಹೋದರೆ, ಉಪಾ ಧ್ಯಾಯನೂ ಹೊಣೆಯಾಗುತ್ತಾನೆ.

"ಅತೀತ್ಯ ಬಂಧೂನವಲಂಘ್ಯ ಮಿತ್ರಾಣ್ಯಾಚಾರ್ಯಮಾಗಚ್ಛತಿ ಶಿಷ್ಯದೋಷಃ"

ದೇಶದಲ್ಲಿ ಶಿಕ್ಷಣ ಸುಧಾರಣೆಯ ಮಾತು ಕೇಳುತ್ತಿದೆ; ಅದರಲ್ಲಿ ಕನ್ನಡಕ್ಕೆ ಸರಿಯಾದ ಸ್ಥಾನ ದೊರೆತು ಅದು ನಮ್ಮ ಜೀವನದಲ್ಲಿ ಹಾಸುಹೊಕ್ಕಾದ ಹೊರತು, ಇಂಥ ಅಲ್ಪ ಪ್ರಯತ್ನಗಳೆಲ್ಲಾ ಕೃತಕವಾಗಿ ಶೋಷಿಸಿ ಹೋಗುತ್ತವೆ; ಔಪಚಾರಿಕವಾಗಿ ನಿಲ್ಲುತ್ತವೆ. ಹಾಗಾಗದೆ, ಕನ್ನಡ ಭಾಷಾ ಸಾಹಿತ್ಯಗಳು ನಿಜವಾಗಿ ಬೆಳೆದು, ಅದರಿಂದ ಜನ ಬದುಕುವಂತಾಗಲಿ ಎಂದು ಹಾರೈಸೋಣ!

ಈ ಲೇಖನ ಮಣಿಗಳನ್ನು ಪೋಣಿಸಿ, ಕುಣಿಕೆಗಳಿಂದ ಸುತ್ತಿ, ಮಾಲೆ ಮಾಡಿರುವ ಬಂಗಾರದ ತಂತಿ ನಿಮ್ಮ ಶ್ರದ್ಧೆ ಪ್ರೀತಿ ಅಭಿಮಾನ. ಅವಕ್ಕೆ ಪ್ರತಿಫಲ ವಿದ್ಯಾರ್ಥಿಗಳು ನಿಮ್ಮಲ್ಲಿಟ್ಟಿರುವ ಭಕ್ತಿ, ಪ್ರೀತಿ. ವಿದ್ಯಾರ್ಥಿಗಳ ಭಕ್ತಿ ಗೌರವಗಳನ್ನು ಸಂಪಾದಿಸಿದ ಉಪಾಧ್ಯಾಯ, ಕುಟುಂಬದವರ ಪ್ರೀತಿ ಯನ್ನು ಪಡೆದ ಸಂಸಾರಿಯಂತೆ, ಧನ್ಯ! ಹುಡುಗರಿಗೆ ತಮ್ಮ ಉಪಾಧ್ಯಾಯ ರಲ್ಲಿ ಭಕ್ತಿ ಹೀಗೆಯೇ ಬೆಳೆಯಲಿ! ಉಪಾಧ್ಯಾಯರಿಗೆ ಹುಡುಗರಲ್ಲಿ ಆದರ ಹೀಗೆಯೇ ಬೆಳೆಯಲಿ!

ನನ್ನ ಮೆಚ್ಚಿಕೆಯ ಕುರುಹಾಗಿ (1) ಶ್ರೀ ಎಂ. ಆರ್. ಸಿ. ನಾಗರಾಜನ್ (2) ಹಾಲಾಡಿ ಮಾರುತಿರಾವ್, (3) ಬಿ. ಟಿ. ಅಶ್ವತ್ಥನಾರಾಯಣರಾವ್, (4) ಎಂ. ಚಂದ್ರಶೇಖರಯ್ಯ (5) ಕೆ. ಎನ್. ಶ್ರೀಹರಿರಾವ್, ಇವರಿಗೆ ನನ್ನ 'ಭಾಷಣಗಳು ಮತ್ತು ಲೇಖನಗಳು—ಭಾಗ ೨' ಈ ಗ್ರಂಥದ ಒಂದೊಂದು ಪ್ರತಿಯನ್ನು ಕಳುಹಿಸಿದ್ದೇನೆ. ದಯವಿಟ್ಟು ಅವರಿಗೆ ಕೊಡಿಸಬೇಕು.

ಇಂತೀ, ತಮ್ಮ,

ಬಸವನಗುಡಿ,
ತಾ. ೨೩-೧-೧೯೫೩.

ಎ. ಆರ್. ಕೃಷ್ಣಶಾಸ್ತ್ರೀ

## ಭಾಸ ಕವಿಯ 'ಪಂಚರಾತ್ರ'ದಿಂದ

ಅತೀತ್ಯ ಬಂಧೂನವಲಂಘ್ಯಮಿತ್ರಾ-
ಣ್ಯಾಚಾರ್ಯಮಾಗಚ್ಛತಿ ಶಿಷ್ಯದೋಷಃ ।
ಬಾಲಂ ಹ್ಯಪತ್ಯಂ ಗುರವೇ ಪ್ರದಾತು-
ರ್ನೈವಾಪರಾಧೋऽಸ್ತಿ ಪಿತುರ್ನ ಮಾತುಃ

**ದೇವಶಿಖಾಮಣಿ** ಶ್ರೀ ಅಳಸಿಂಗರಾಚಾರ್ಯರ ಅನುವಾದ:

ಬೆರೆಯದು ಬಂಧುಗಳೊಳ್ ಮಿ-
ತ್ರರನೈದದು ಶಿಷ್ಯಪಾಪಮುಡರ್ವುದು ಗುರುವಂ ।
ಗುರುವೆಡೆಗೆ ಬಾಲ್ಯದೊಳೆ ಪು-
ತ್ರರನೊಪ್ಪಿಸೆ ಪೆತ್ತವರ್ಗಮುಂಟದು ದೋಷಂ ॥

ಶ್ರೀ ಎಲ್. ಗುಂಡಪ್ಪನವರ ಅನುವಾದ:

ಬಂಧುಗಳ ಮೀರಿ, ಸಂಗಾತಿಗಳನುಳಿದು ತಾ-
ನಾಚಾರ್ಯನೆಡೆಗೆ ಬರುವುದು ಶಿಷ್ಯದೋಷ.
ಎಳವೆಯೊಳೆ ಮಗುವ ಗುರುವೆಡೆಗೆ ತಂದೊಪ್ಪಿಸುವ
ತಂದೆಯಲು ತಾಯಿಯಲು ತಪ್ಪಿನಿತುಮಿರದು.

# ‘ಬಾಲ ಸರಸ್ವತಿ’ಯನ್ನು ಕುರಿತು

ಸೆಂಟ್ರಲ್‌ಕಾಲೇಜಿನ ವಿದ್ಯಾರ್ಥಿಗಳು ಬರೆದ ಪ್ರಬಂಧಗಳು, ಹರಟೆ, ಕತೆ, ಜನಪದ ಕತೆ, ಸಾಹಿತ್ಯ ವಿಮರ್ಶೆ, ಸಂವಾದ ಕಲ್ಪನೆ, ಕವನ ಮುಂತಾದವುಗಳಲ್ಲಿ ಆರಿಸಿ ಬಂದ ಲೇಖನಗಳನ್ನೊಳಗೊಂಡ “ಬಾಲ ಸರಸ್ವತಿ”ಯು ಕನ್ನಡಿಗರೆಲ್ಲರೂ ಓದಬೇಕಾದ ಗ್ರಂಥ. ಕಾಲೇಜಿನಲ್ಲಿ ಓದುವ ವಿದ್ಯಾರ್ಥಿಗಳ ವಿಚಾರಲಹರಿಯ ವೈವಿಧ್ಯವನ್ನು ಇಲ್ಲಿ ಕಾಣಬಹುದು. ಪ್ರಯತ್ನಪಟ್ಟರೆ ವಿದ್ಯಾರ್ಥಿಗಳು ಉತ್ತಮ ಸಾಹಿತ್ಯವನ್ನು ಸೃಷ್ಟಿಸಬಲ್ಲರು ಎಂಬುದಕ್ಕೆ ಇದು ಉತ್ತಮ ಸಾಕ್ಷಿಯಾಗಿದೆ. ಇವರ ಕರ್ತೃತ್ವಶಕ್ತಿ ಬಹುಮುಖವಾಗಿದೆ. ದೊಡ್ಡ ದೊಡ್ಡ ತತ್ತ್ವವಿಚಾರಗಳನ್ನು ಎಷ್ಟು ಆಸ್ಥೆಯಿಂದ ಚರ್ಚಿಸಬಲ್ಲರೋ ಅಷ್ಟೇ ಸೌಲಭ್ಯದಿಂದ ವ್ಯಂಗ್ಯವಾದ, ಹಾಸ್ಯಪೂರ್ಣವಾದ ಲೇಖನಗಳನ್ನೂ ಬರೆಯಬಲ್ಲರು, ಕರುಣಾರ್ದ್ರ ಚಿತ್ರಗಳನ್ನು ಚಿತ್ರಿಸಬಲ್ಲರು, ಪ್ರಕೃತಿಯ ಸೊಬಗಿನಲ್ಲಿ ಮೈಮರೆಯಬಲ್ಲರು, ಸುಂದರವಾದ ಸಂಭಾಷಣೆಗಳನ್ನು ಕಲ್ಪಿಸಬಲ್ಲರು. ‘ಬಾಲ ಸರಸ್ವತಿ’ಯಲ್ಲಿ ಈ ಎಲ್ಲ ಬಗೆಯ ಸಾಹಿತ್ಯದ ಉದಾಹರಣೆಗಳನ್ನೂ ಕಾಣಬಹುದು.

‘ಬೆಲ್ಲದ ಕಹಿ’, ‘ಉಪ್ಪಿನಕಾಯಿ’, ‘ಮಗು ಅತ್ತರೆ ಸ್ವರ್ಗ’, ‘ಚಿನ್ನದ ದೋಸೆ’ ಈ ಬರಹಗಳು ಒಂದಕ್ಕಿಂತ ಒಂದು ಚೆನ್ನಾಗಿವೆ. ‘ಮಗು ಅತ್ತರೆ ಸ್ವರ್ಗ’ದಲ್ಲಿನ ಆದರ್ಶ ಸಂಸಾರ ಚಿತ್ರ, ‘ಬೆಲ್ಲದ ಕಹಿ’ಯ ರೇರ್ಷ ಅವಾಂತರ, ‘ಉಪ್ಪಿನಕಾಯಿ’ಯ ವಿಚಾರ ವೈಖರಿ ಎಲ್ಲವೂ ಮೆಚ್ಚತಕ್ಕವೇ ಆಗಿವೆ. ‘ಬೆಲ್ಲದ ಕಹಿ’ ಹೆಸರು ಆ ಚಿತ್ರಕ್ಕೆ ಸರಿಯಾಗಿ ಒಪ್ಪುತ್ತದೆ. ‘ಚಿನ್ನದ ದೋಸೆ’ಯಲ್ಲಿನ ಕಥೆ, ಉಪಕಥೆಗಳು ಹೊಂದಿಕೊಂಡಿವೆ; ನೈಜವಾದ ಚಿತ್ರಣಕ್ಕೆ ಮಾದರಿಯಾದ ಕಥೆ ‘ಮಲ್ಲಯ್ಯನ ಬಸವ’ ಚಿಕ್ಕದಾದರೂ ಚೊಕ್ಕವಾಗಿದೆ. ಪ್ರಪಂಚದಲ್ಲಿ ಮಲ್ಲಯ್ಯನಂತಹವರು ವಿರಳ. ಇವನು ‘ಬಸವ’ನಲ್ಲಿ ತೋರಿದ ಆತ್ಮೀಯತೆ, ಅದು ಸಾಯುವ ಸಮಯದಲ್ಲಿ ತನ್ನ ಆತ್ಮವೂ ಅದರೊಂದಿಗೆ ಹೊರಟಾಗ ವ್ಯಕ್ತವಾಗುತ್ತದೆ. ಇದೊಂದು ಹೃದಯ ಕರಗಿಸುವ ಚಿತ್ರ. ಇದು ಕಥೆಯೂ ಅಲ್ಲ. ಪ್ರಬಂಧವೂ ಅಲ್ಲ. ಬರಿಯ ಒಂದು ಚಿತ್ರ ಮಾತ್ರ.

'ನಾನೂ ಮತ್ತು ನನ್ನ ನೆರೆಯವರೂ' ಒಂದು ಸಾಮಾನ್ಯ ಪ್ರಬಂಧ. ಈ ಪ್ರಬಂಧದ ಮೊದಲನೆಯ ಭಾಗಕ್ಕೂ ಕಡೆಯದಕ್ಕೂ ಅಷ್ಟು ಸಮಂಜಸವಾದ ಸಂಬಂಧವಿಲ್ಲ. 'ಅವಾಂತರ', 'ಕಾಲಾಣೆ' ಹೇಳಿಸಿಕೊಳ್ಳುವಷ್ಟು ಉತ್ತಮವಾಗಿಲ್ಲ. ಜೀವನದಲ್ಲೇ M. O. ಬಾರದ ದುರದೃಷ್ಟಶಾಲಿಯ ಪ್ರಲಾಪವನ್ನು ಕುರಿತ 'ಕಾದಿರುವನು ಶ್ರೀಹರಿ' ಶೈಲಿ ವಿಚಾರಗಳೆರಡರಲ್ಲೂ ಉತ್ತಮವಾಗಿದೆ. ಉತ್ತಮವಾದ ವರ್ಣನಾಚಾತುರ್ಯಕ್ಕೆ 'ಕಲ್ಪಿಸಿದ ಕನಸು' ಕಾಣಬೇಕು. ವಿಚಿತ್ರವಾದ ಈ ದೊಡ್ಡ ಕನಸಿನ ಸೊಬಗೆಲ್ಲಾ ಇಲ್ಲಿನ ಪ್ರಕೃತಿ ವರ್ಣನೆಯನ್ನು ಅವಲಂಬಿಸಿದೆ. ಇದನ್ನು ಕನಸೆಂದು ಭಾವಿಸಿದರೆ ಮಾತ್ರ ಇದಕ್ಕೆ ಬೆಲೆ. ಪ್ರಕೃತಿಯ ಮೋಹಕತೆಯಲ್ಲಿ ಲೇಖಕರು ವಿರಾಮವಾಗಿ ವಿಹರಿಸಿದ್ದಾರೆ. ಇವರ ಕಲ್ಪನೆಗಳಿಗೆ ರಸಪುಷ್ಟಿ ಚೆನ್ನಾಗಿ ಬಂದಿದೆ.

'ಸ್ನೇಹದ ಬೆಲೆ'ಯನ್ನೋದಿದಾಗ ಬೇಸರವೇ ಆಗುತ್ತದೆ. ಈ ಸಂಗ್ರಹದಲ್ಲಿ ಇದನ್ನು ಏಕಾದರೂ ಸೇರಿಸಿದರೋ ಎನ್ನಿಸಿದರೂ ಹೆಚ್ಚಲ್ಲ. ಇಂಥ ಕತೆಗಳನೇಕವನ್ನು ನಾವು ಈಚಿನ ಪತ್ರಿಕೆಗಳಲ್ಲೂ ಹಿಂದಿನ ಕಥಾಸಂಗ್ರಹಗಳಲ್ಲೂ ನೋಡಬಹುದಾಗಿದೆ. ಇದರಲ್ಲಿ ಯಾವುದೇ ಒಂದು ವೈಶಿಷ್ಟ್ಯವಾಗಲೀ, ಕಥಾವಸ್ತುವಿನಲ್ಲಿ ನಾವೀನ್ಯವಾಗಲಿ ಇಲ್ಲ. 'ಪ್ರಯಾಣದ ಅಸೌಕರ್ಯಗಳು' ಇದರಂತೆಯೇ ಹಳೆಯ ವಸ್ತುವಾದರೂ ಹಾಸ್ಯಪ್ರಧಾನವಾದ ಹೊಸ ಕವಚವನ್ನು ಧರಿಸುವುದರಿಂದ ಈ ಸಂಗ್ರಹದಲ್ಲಿ ಸ್ಥಳ ಪಡೆಯಬಲ್ಲುದು. "ಕ್ಲಾಸಿನಲ್ಲಿ ಕಡಲುಯಾತ್ರೆ', 'ತಾಳ್ಮೆಯ ಮೂರ್ತಿ', 'ಇತ್ಯಾದಿಯ ಆತ್ಮಕಥೆ' ಅತ್ಯುತ್ತಮವಾದುವುಗಳು. 'ಕ್ಲಾಸಿನಲ್ಲಿ ಕಡಲು ಯಾತ್ರೆ'ಯಲ್ಲಿ ಕಂಡುಬರುವ ಫಲವತ್ತಾದ ಕಲ್ಪನೆ, ಕಾಲ್ಪನಿಕವಾದದ್ದನ್ನೂ ನೈಜವಾದುದೇ ಎಂದು ಭಾವಿಸುವಂತೆ ಮಾಡುವ ಶೈಲಿ, ರಸವತ್ತಾದ ನಿರೂಪಣೆ ಅದನ್ನು ಈ ಗ್ರಂಥದಲ್ಲಿನ ಒಂದು ಅತ್ಯುತ್ತಮ ಕೃತಿಯನ್ನಾಗಿ ಮಾಡಿದೆ. ಈ ಲೇಖನವನ್ನು ಓದುತ್ತಾ ಹೋದಂತೆ ಓದುಗನಿಗೆ ಒಂದು ಬಗೆಯ ಅರ್ಧಪರಿವೆಯ ಸ್ಥಿತಿ ಉಂಟಾಗಿ ಕಥೆಯಲ್ಲಿ ನಡೆದುದೆಲ್ಲವನ್ನೂ ತಾನೇ ಅನುಭವಿಸಿದಂತಾಗುತ್ತದೆ.

ಎಲ್ಲರೂ ಕೀಳು ಎಂದುಬಿಡುವ ಸಣ್ಣ ಅಪ್ರಸಿದ್ಧ ವಸ್ತುಗಳನ್ನು ವಿಷಯವಾಗಿ ಆರಿಸಿಕೊಂಡರೂ ಎಂತಹ ಉತ್ತಮ ಪ್ರಬಂಧವನ್ನು ಬರೆಯಬಹುದು ಎಂಬುದಕ್ಕೆ 'ತಾಳ್ಮೆಯ ಮೂರ್ತಿ' ಒಳ್ಳೆಯ ನಿದರ್ಶನ. ಎಲ್ಲರಿಂದಲೂ

ತೆಗಳಲ್ಪಡುವ ಸಾಮಾನ್ಯ ಪ್ರಾಣಿಯಾದ ಕತ್ತೆ ಇಲ್ಲಿ ಶ್ರೀಮಾನ್ ಕತ್ತೆಯವರಾಗಿ, ತಾಳ್ಮೆಯೇ ಮೊದಲಾದ ತಮ್ಮ ಅಮೋಘ ಗುಣಗಳನ್ನು ಪ್ರದರ್ಶಿಸುತ್ತದೆ. ಪ್ರಬಂಧದ ಉದ್ದಕ್ಕೂ ತಿಳಿಹಾಸ್ಯ ಗುಪ್ತಗಾಮಿನಿಯಾಗಿ ಹರಿಯುತ್ತದೆ. ಈ ಪ್ರಬಂಧದ ಲೇಖಕರಲ್ಲಿ ನಾವು 'ಕಸವನ್ನು ರಸವಮಾಡುವ' ಜಾಣ್ಮೆಯನ್ನು ಕಾಣಬಹುದು. ಆರಿಸಿಕೊಂಡ ವಿಷಯ ಕ್ಷುದ್ರವಾದರೇನು? ಬರೆಯುವುದರ ಲ್ಲಲ್ಲವೇ ಪ್ರಬಂಧಗದ ಜೀವಾಳ? ಎಷ್ಟು ಹೊಲಸುಪ್ರಾಣಿ ಕತ್ತೆ; ಆದರೆ ಅದನ್ನು ಕುರಿತ ಈ ಪ್ರಬಂಧ ಅಷ್ಟೂ ಸೊಗಸಾಗಿದೆ.

'ಇತ್ಯಾದಿಯ ಆತ್ಮಕಥೆ'ಯಂತಹ ಬರಹಗಳು ನಮ್ಮ ಸಾಹಿತ್ಯದಲ್ಲಿ ಕಡಮೆ. ಈ ಲೇಖನದಲ್ಲಿ ಇತ್ಯಾದಿಯ ಸರ್ವಾಂತರ್ಯಾಮಿತ್ವ, ಅದರ ಅಮಿತ ಪ್ರಯೋಜನಗಳು ಮುಂತಾದುವನ್ನು ಚರ್ಚಿಸಿದ್ದಾರೆ. ಸಮಾಲೋಚಕನ ಮನಸ್ತಾಪದ ಪರಿಣಾಮ, ಮಹಾಶಯರೊಬ್ಬರ ಪಾಂಡಿತ್ಯ ಪ್ರದರ್ಶನ ಭಾಷಣ ಮುಂತಾದ ವಿವರಗಳು ನಗುವಿನ ತೆರೆಗಳನ್ನೆಬ್ಬಿಸುವುದು ಮಾತ್ರವಲ್ಲದೆ ವ್ಯಂಗ್ಯ ವಾದ ಕೂರಂಬುಗಳನ್ನೂ ಎಸೆಯುತ್ತವೆ.

ಚಂದ್ರಕುಮಾರಿ, ಬೀರಣ್ಣ, ತಕ್ಕಣ್ಣನ ಮಗ, ಗಳ-ಗಂಟೆ, ಚಂದ್ರ ಮತಿ, ಗಾಜಿನ ಕಂಭ, ಮರಗೋಪಿ—ಮೊದಲಾದವು ಒಂದರಂತೆ ಒಂದಿಲ್ಲ. ಇವುಗಳಲ್ಲಿ ಕೆಲವಾದರೂ ಸುಂದರ ಕಥೆಗಳು. "ಚಂದ್ರಕುಮಾರಿ" ಕಥೆಯನ್ನು ಅಜ್ಜಿ ಹೇಳಿದ ಭಾಷೆಯಲ್ಲೇ ಉಳಿಸಿರುವುದು ಒಂದು ಹೊಸ ಲಕ್ಷಣ. ಈ ಬಗೆಯ ಗ್ರಾಮ್ಯ ಶೈಲಿ ಜನಪದ ಕತೆಗಳಿಗೆ ಒಪ್ಪುತ್ತದೆ. ಸರಾಗವಾಗಿ ಓಡುವ ಈ ಕಥೆ ಕೇಳುವವರಲ್ಲಿ ಸರ್ವದಾ ಒಂದು ಬಗೆಯ ನಿರೀಕ್ಷಣೆಯನ್ನು ಬೆಳೆಸು ತ್ತದೆ. ಕಥೆ ಮುಗಿಯುವ ವರೆಗೂ ನಾವು ಚೆನ್ನಾಗಿ ಅದರ ಹಿಡಿತದಲ್ಲೇ ಇರು ತ್ತೇವೆ. 'ಬೀರಣ್ಣ', 'ತಕ್ಕಣ್ಣನ ಮಗ' ಉತ್ತಮಕಥೆಗಳು. ನಂಬಲನರ್ಹ ವಾದ ಸನ್ನಿವೇಶಗಳೂ ಅನೇಕ ಬರುವುದುಂಟು. ಆದರೆ ಜನಪದ ಕತೆಗಳಲ್ಲಿ ಅವುಗಳಿಗೆಲ್ಲಾ ಸ್ವಾತಂತ್ರ್ಯ ಕೊಡಬೇಕೆಂದು ಕಾಣುತ್ತದೆ. 'ಗಳ-ಗಂಟೆ', 'ಮರಗೋಪಿ' ಅಷ್ಟೇನೂ ಮೆಚ್ಚುವಂತಿಲ್ಲ. ಈ ಕಥೆಗಳ ಕಟ್ಟಡದಲ್ಲಿ ಶೈಥಿಲ್ಯ ಹೆಚ್ಚು. 'ಚಂದ್ರಮತಿ'ಯ ಕಥೆ ಸಾಮಾನ್ಯವಾಗಿ ಅನೇಕ ಜನಪದ ಕತೆಗಳಲ್ಲಿ ಬರುವ ಕಾಳಿಕಾ ದೇವಾಲಯ, ಋಷಿಗಳು, ಋಷಿಕನ್ಯೆಯರು ಎಲ್ಲವನ್ನೂ ಒಳಗೊಂಡಿದೆ. ಈ ಗುಂಪಿನಲ್ಲಿ ರಾಕ್ಷಸ ಏಕೆ ಬಿಟ್ಟುಹೋದನೋ ಎನ್ನುವವರು

'ಗಾಜಿನ ಕಂಭ'ದಲ್ಲಿ ಅವನನ್ನೂ ನೋಡಬಹುದು. ಅಷ್ಟೇ ಅಲ್ಲ, ಅದೇ ಕಥೆಯಲ್ಲಿ ಮೊರ ಪೊರಕೆ ಗೂಡೆಗಳನ್ನು ಹಿಡಿದು ಹುಣಿಸೆ ಮರದೊಳಗಿಂದ ಧಾವಿಸಿ ಬರುವ ದೆವ್ವ ಪಿಶಾಚಿಗಳನ್ನೂ ಕಾಣಬಹುದು. ಕೆಲವು ಬಾರಿ ಈ ವೈಚಿತ್ರ್ಯಗಳನ್ನು ನೋಡಿ ನಗುಬರುತ್ತದೆ. ಅಂಜುವ ಮನಸ್ಸಿನವರಿಗೆ ಹೆದರಿಕೆಯೂ ಆಗಬಹುದು. ಈ ಸಂಗ್ರಹದಲ್ಲಿ ಬರುವ ಜನಪದ ಕತೆಗಳು ನಮ್ಮ ದೇಶದ ನಾನಾ ಮೂಲೆಯವು. ಆದರೂ ಇವುಗಳೆಲ್ಲಕ್ಕೂ ಒಂದು ನಿಶ್ಚಿತ ಕಟ್ಟು ಇರುವುದು ಎಲ್ಲರಿಗೂ ಗೋಚರವಾಗುತ್ತದೆ. ಈ ಕತೆಗಳು ಅದ್ಭುತ ಮತ್ತು ಭಯಂಕರವಾದವುಗಳನ್ನು ವರ್ಣಿಸುವುದಷ್ಟೇ ಅಲ್ಲ, ತಿಳಿನಗೆಯ ಹೊನಲನ್ನು ಹರಿಸುವುದೂ ಉಂಟು.

"ಇಂಗ್ಲಿಷ್ ಸಾಹಿತ್ಯದ ರುಚಿ"ಯನ್ನು ಕುರಿತು ಬರೆದಿರುವ ಲೇಖನಗಳಲ್ಲಿ "ರಬ್ಬೈಬೆನ್ ಎಜ್ರ" ಸತ್ತ್ವಪೂರ್ಣವಾದ ತಾತ್ತ್ವಿಕ ಲೇಖನ. ಈ ಲೇಖನದಲ್ಲಿ ಬ್ರೌನಿಂಗ್ ಕವಿಯ ತತ್ತ್ವ, ಜೀವನವನ್ನು ಅವನು ಕಂಡ ರೀತಿ ಮುಂತಾದ ವಿಚಾರಗಳ ವಿಮರ್ಶೆ ಇದೆ. ಆದರೆ ಲೇಖನವನ್ನು ಅದಷ್ಟು ಬೆಳೆಸಬಾರದೆಂದುಕೊಂಡು ವಿವರಣೆ ಕಡಮೆಯಾಗಿದೆ.

"ಲೈಟ್ ಆಫ್ ಏಷ್ಯಾ" ಬರೆದಿರುವ ಲೇಖಕರ ಸ್ವತಂತ್ರ ವಿಚಾರಸರಣಿ ಪ್ರಶಂಸನೀಯವಾಗಿದೆ. ಎಷ್ಟು ಹೇಳಬೇಕೋ ಅಷ್ಟನ್ನು ಚೆನ್ನಾಗಿ ಹೇಳುವ ಸಿದ್ಧಿ ಇವರಿಗೆ ಸಾಧಿಸಿದೆ. "ದಿ ಬ್ಲೂ ವೈಲ್" ಚಿತ್ರವಿಮರ್ಶೆಯಲ್ಲಿ ವಿಮರ್ಶೆಯ ಲಕ್ಷಣಗಳೇ ಇಲ್ಲ. ಚಲಚ್ಚಿತ್ರವಿಮರ್ಶೆ ಎಂದರೆ ಬರಿಯ ಕಥೆಯ ನಿರೂಪಣೆಯಲ್ಲ ಎಂಬುದನ್ನು ಈ ಲೇಖಕರು ಅರಿತುಕೊಳ್ಳಬೇಕು. ನಿರ್ದೇಶನ, ಛಾಯಾಗ್ರಹಣ, ಪಾತ್ರ, ನಟನ, ಶಿಲ್ಪ ಮುಂತಾದವುಗಳನ್ನು ಉಚಿತವಾದ ಉದಾಹರಣೆಗಳೊಡನೆ ವಿಮರ್ಶಿಸಬೇಕಾಗಿತ್ತು.

"ಹಾಳುಬಿದ್ದ ಹಳ್ಳಿ" ಇದರ ವಿಚಾರವಾಗಿ ಏನೂ ಹೇಳದಿರುವುದೇ ಕ್ಷೇಮ. ಇಂಗ್ಲಿಷ್ ಸಾಹಿತ್ಯದ ಸವಿಯನ್ನು ಸಾಮಾನ್ಯರು ಸವಿಯಲು ಸಹಾಯಮಾಡುವ ಮಾತಿರಲಿ, ಮೂಲದ ಭಾಷಾಂತರವೂ ಸರಿಯಾಗಿಲ್ಲ. ಎಷ್ಟೋ ಕಡೆ ಇದಕ್ಕೆ ಮೂಲವಾದ "Deserted Village" ಪದ್ಯದ ಸ್ವಾರಸ್ಯವನ್ನು ಹೊರಗೆಡಹುವಂತಹ "ಬಿತ್ತಿದ ಹೊಲ, ಹರಿಯುತ್ತಿದ್ದ ಹೊಳೆ, ಪುಟ್ಟ ಗುಡಿಸಲು, ಸುತ್ತುತ್ತಿದ್ದ ಗಿರಣಿ, ಹತ್ತಿರದ ಗಿರಿಯ ತುದಿಯಲ್ಲಿದ್ದ

ಒಪ್ಪಾದ ದೇಗುಲ" ಇಂತಹ ಕೆಲವು ವರ್ಣನೆಗಳನ್ನು ಬಿಟ್ಟರೆ ಉಳಿದದ್ದು ಎಲ್ಲಾ ಶುಷ್ಕವಾಗಿದೆ. 'ಪ್ರಮೋದ'ಕ್ಕೆ ಕೊಟ್ಟಿರುವ ಹೆಸರು ಸರಿಯಲ್ಲ. ಮೆಚ್ಚತಕ್ಕ ಗುಣಗಳೇನೂ ಇಲ್ಲ ಇದರಲ್ಲಿ.

'ಉಪ್ಪಿನಕಾಯಿ' ಮತ್ತು 'ಲೈಟ್ ಆಫ್ ಏಷ್ಯಾ'ಗಳ ಲೇಖಕರೇ ಬರೆದ ಎರಡು ಕವಿತೆಗಳಲ್ಲಿ 'ತೂಕಡಿಸುವ ಬ್ಯಾಟರನಿಗೆ' ಚೆನ್ನಾಗಿದೆ. ಇನ್ನೊಂದು 'ಬಹುಮಾನ' ಸರೋಜಿನಿ ನಾಯ್ಡುರವರ 'Guerdon' ಅನ್ನು ಅನುಸರಿಸಿ, ಸಾರಾಂಶ ಹಿತವಾಗಿದ್ದರೂ "ಗುಂಗು" ಸರಿಯಾಗಿಲ್ಲ.

'ಯಮನಾದನ್ ಅನಾಮಿಕನ್', 'ಮುನಿರಾಕ್ಷಸ', 'ಸಮವಿಷಮವರ್ತಿ' ಒಂದು ಗುಂಪಿನ ಲೇಖನಗಳು. ಸಂವಾದ ಕಲ್ಪನೆಯ ಜಾಣ್ಮೆಯಲ್ಲಿ 'ಯಮನಾದನ್ ಅನಾಮಿಕನ್' ಮೊದಲನೆಯ ಸ್ಥಾನವನ್ನೂ, 'ಸಮವಿಷಮವರ್ತಿ' ಎರಡನೆಯ ಸ್ಥಾನವನ್ನೂ ಪಡೆಯುತ್ತದೆ. ಆದರೆ ವಿಶ್ವಾಮಿತ್ರನು ಯಮನನ್ನು ಸಂಭಾಷಣೆಯ ಮಧ್ಯೆ ಒಂದು ಕಡೆ 'ಛೀ ಮೂರ್ಖ . . . ." ಎನ್ನುತ್ತಾನೆ. ಆಗ ಸ್ವಾಭಿಮಾನಿಯಾದ ಕಾಲನಿಗೆ ಸಾಕಷ್ಟು ಕೋಪ ಬಂದಿರಬೇಕು. ಆದರೂ ಮರುಕ್ಷಣವೇ ದೈನ್ಯದಿಂದ ಕೈಮುಗಿಯುತ್ತಾನಂತೆ ವಿಶ್ವಾಮಿತ್ರನಿಗೆ! ಸಾಧ್ಯವೇ? ಈ ವಿಷಮವರ್ತನೆಗೆ 'ಸಮವಿಷಮವರ್ತಿ'ಯಲ್ಲಿ ಉತ್ತರ ದೊರಕುವುದಿಲ್ಲ.

'ಮಾದರಿಯ ಮಾವ', 'ಪೊಸದು ತೆರನೀ ಮಿಥಿಲೆಯರಸನದು' ಇವುಗಳಲ್ಲಿ 'ಯಮನಾದನ್ ಅನಾಮಿಕನ್' ಬರೆದವರೇ ಬರೆದ 'ಪೊಸದು ತೆರನೀ ಮಿಥಿಲೆಯರಸನದು' ಹೊಸಪ್ರಯೋಗದಲ್ಲಿ ಅಷ್ಟು ಯಶಸ್ವಿಯಾಗಿಲ್ಲ. ಇದರ ಮೊದಲನೆಯ ಭಾಗದಲ್ಲಿ ಬರುವ "ಪ್ರಜೆಗಳೆಮ್ಮದೆ ಆಳಲು ಇನಿತಿರಲು . . . ." ಇತ್ಯಾದಿ ಗಹನವಾದ ಶೈಲಿ ಕಡೆಗೆ "ಅಯೋಧ್ಯೆಯ ಪರಿಸ್ಥಿತಿ ಬೇಗನೆ ಉತ್ತಮಗೊಳ್ಳುವುದು" ಎನ್ನುವಾಗ ಸುಲಭ ಗದ್ಯವಾಗುತ್ತದೆ. ಯಾವುದಾದರೂ ಒಂದು ಪದ್ಧತಿಯನ್ನೇ ಉದ್ದಕ್ಕೂ ಉಳಿಸಿಕೊಂಡಿದ್ದರೆ ಚೆನ್ನಾಗಿತ್ತು. 'ಮಾದರಿಯ ಮಾವ'ನಾಗಿ ಜನಕನಾಡುವ ಮಾತು ಬಹಳ ಹೆಚ್ಚು. ಪತ್ರಿಕಾ ಪ್ರತಿನಿಧಿಯ ಪ್ರತಿ ಪ್ರಶ್ನೆಗೂ ಅವನು ಧರ್ಮದ ವಿಚಾರವಾಗಿ ದೊಡ್ಡ ಭಾಷಣವನ್ನೇ ಮಾಡುತ್ತಾನೆ. ಧರ್ಮಬೋಧೆಯ ಭಾರದಿಂದ ಸಂಭಾಷಣೆ ತನ್ನ ಸಹಜತೆಯನ್ನು ಕಳೆದುಕೊಂಡಿದೆ.

'ಗೆದ್ದವ ಸೋತ, ಸೋತವ ಸತ್ತ' ಬರೆದವರು ಗೆದ್ದಂತೆ ಕಂಡರೂ ಸೋತಿದ್ದಾರೆ. ಪ್ರಬಂಧದ ಉದ್ದಕ್ಕೂ ವಿಷಯವನ್ನು ಬಿಟ್ಟು ದೂರ ಹೋಗಿರುವುದೇ ಬಹಳ. ಈ ದೃಷ್ಟಿಯಲ್ಲಿ ಇವರು ಸೋತಿದ್ದಾರೆ. ಆದರೆ ಇವರ ಗೆಲುವಿನ ನಿಲುವಾಗಿ ಇವರು ಕೊಟ್ಟಿರುವ ಮಾವಿನಹಣ್ಣಿನ ಉದಾಹರಣೆಯಿದೆಯಲ್ಲಾ, ಆರಿಸಿಕೊಂಡ ವಿಷಯದ ಪ್ರತಿಪಾದನೆಗೆ ಸಮಯೋಚಿತವಾದ ಇಂತಹದೊಂದು ಉದಾಹರಣೆಯೇ ಸಾಕು ಎಂದರೂ ತಪ್ಪಾಗಲಾರದು. ಈ ದೃಷ್ಟಿಯಲ್ಲಿ ಇವರು ಗೆದ್ದಿದ್ದಾರೆ.

'ಯಾರಿಗೆ ಬೇಕು ಈ ಎಲ್ಲ ಕಗ್ಗ?'ದ ವೈಶಿಷ್ಟ್ಯವೆಂದರೆ ಅದು ಪ್ರಾರಂಭಿಸುವ ಮತ್ತು ಕೊನೆಗೊಳ್ಳುವ ರೀತಿ. 'ಒಂದು ಪ್ರಬಂಧ ಬರೆಯಬೇಕು, ಐದು ಪುಟವಿರಬೇಕು, ಸ್ವಾರಸ್ಯವಾಗಿರಬೇಕು' ಎಂದುಕೊಂಡ ಈ ಲೇಖಕರಿಗೆ 'ಯಾರಿಗೆ ಬೇಕು ಈ ಎಲ್ಲ ಕಗ್ಗ?' ಎನಿಸುತ್ತದೆ. ಹಾಗೇ ಕಗ್ಗ ಕವಲೊಡೆದು ಬೆಳೆಯುತ್ತದೆ. ತಾನು ಬರೆದ ಪ್ರಬಂಧವೇ ಕಗ್ಗವಾಗಬಹುದೇನೋ ಎನ್ನುವವರೆಗೂ ಬೆಳೆಸಿ ಮುಗಿಸುತ್ತಾರೆ. ಪ್ರಬಂಧಗಳನ್ನು ಮುಗಿಸುವಾಗ ಪ್ರಾರಂಭಿಸುವಾಗ ತೊಂದರೆಪಡುವ ಲೇಖಕರು ಇಲ್ಲಿ ಪಾಠಕಲಿಯಬಹುದು.

'ಯಾರಿಗೆ ಬೇಕು ಈ ಎಲ್ಲ ಕಗ್ಗ?' ಎಂಬುದು ಈ ಪುಸ್ತಕದ ಕಡೆಯ ಲೇಖನ. ಯಾರಾದರೂ ಮೇಲ್ಕಂಡ ಹೇಳಿಕೆಯೆ ಪುಸ್ತಕದ ವಿಮರ್ಶೆ ಎಂದುಕೊಂಡರೆ ಬಹಳ ತಪ್ಪಾಗುತ್ತದೆ. ಇದಿಷ್ಟೂ ಪುಸ್ತಕದ ಒಳತಿರುಳಿನ ವಿಚಾರ.

ಪುಸ್ತಕದ ಮುದ್ರಣ ಅಂದವಾಗಿದೆ. ಮುದ್ರಾರಾಕ್ಷಸನ ಹಾವಳಿಯಿಂದ ದೂರವಾಗಿದೆ. ಸುಂದರವಾದ ದೇವಾಲಯದ ಗೋಪುರದ ಮೇಲೆ ಚಿನ್ನದ ಕಲಶ ಇರಿಸಿರುವುದಿಲ್ಲವೇ—ಹಾಗೆ ಅಲ್ಲಲ್ಲಿ ಉದ್ಧರಿಸಲಾಗಿರುವ "ಮಂಕುತಿಮ್ಮನ ಕಗ್ಗ"ದ ವಚನಗಳು ಈ ಪುಸ್ತಕದ ಪ್ರಯೋಜನ, ಗೌರವ, ಅಂದಗಳನ್ನು ಹೆಚ್ಚಿಸಿವೆ. ಕರ್ಣಾಟಕ ಸಂಘದ ಪ್ರಕಟಣೆಯಾದ ಈ ಪುಸ್ತಕವನ್ನು ಕರ್ಣಾಟಕ ಸಂಘದ ಸ್ಥಾಪಕರೂ ಕನ್ನಡದ ಬಹುಮುಖವಾದ ಏಳಿಗೆಗೆ ಕಾರಣರೂ ಆದ ಪೂಜ್ಯ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳವರಿಗೆ ಅರ್ಪಿಸಿರುವುದು ಯುಕ್ತವಾಗಿದೆ.

**—ಪಿ. ಎಸ್. ಚಿದಂಬರಮೂರ್ತಿ**

# ಮಕ್ಕಳ ಮಾತು

"ರಾಜಾ" ಅಂದರೆ, ಅವನಿಗೆ ಕಿವಿಗೇ ಬೀಳುವುದಿಲ್ಲ. "ರಾಜೀ!... ರಾಜಣ್ಣಾ!... ಡೂ ಡೂ!" ಎಂದು ಪಿಳ್ಳಂಗೋವಿ ರಾಗವಾಗಿ ಕೂಗಿದರೆ, "ಟುಕು, ಟುಕು" ಕುಣಿಯುತ್ತಾ ಓಡಿ ಬರುತ್ತಾನೆ. "ಅಂಗಿ ತೆಗೆಯಣ್ಣಾ... ಬಚ್ಚಲಿಗೆ ಇಳಿಯಣ್ಣಾ" ಅಂದ ಕೂಡಲೆ, "ದಾರ, ದಾರ, ಉಂ—ಅಚ್ಚೀ" ಎಂದು ಬೈದು ನಡುಮನೆಯಲ್ಲೆಲ್ಲಾ ನರ್ತನ ಮಾಡುತ್ತಾನೆ. "ನಿನ್ನಂಗಿ... ಅಣ್ಣಾ... ವ್ಯಾ..." ಅಂದರೆ ಸಾಕು, ಹತ್ತಿರಕ್ಕೆ ಓಡಿ ಬಂದು, ಎರಡು ಕೈಗಳಿಂದ ಗುಂಡಿಗಳನ್ನು ಕಿತ್ತು, ಪರಟನ್ನು ತೆಗೆಯಲು "ಅಮ್ಮಾ ಊ..." ಎಂದು ಒಪ್ಪಿಗೆ ಕೊಡುತ್ತಾನೆ.

ಬಚ್ಚಲಿಗೆ ಇಳಿಸಿದ ಕೂಡಲೆ ಜೋರಾಗಿ ಅಳುತ್ತಾನೆ. ಸ್ನಾನ ಇಷ್ಟವಿಲ್ಲವೆಂದು ಸೂಚಿಸುತ್ತಾನೆ. ಒಂದು ಚೆಂಬು ನೀರನ್ನು ಬೆನ್ನಿನ ಮೇಲೆ ಸುರಿದರೆ ಬಚ್ಚಲಲ್ಲೆಲ್ಲಾ ಓಡಾಡಿಕೊಂಡು ಕುಣಿಯುತ್ತಾನೆ. ಅವನಂತೆಯೆ, ಅವನ ಜೊತೆಗೆ ಅಳುತ್ತಾ ನಾನೂ ಕುಣಿದರೆ, ಆಗ ಅಳುವುದನ್ನು ಮರೆತು ತುಂಬ ಸಂತೋಷಪಡುತ್ತಾನೆ. ಬೆನ್ನಿನ ಮೇಲೆ ಒಂದು ಕೈಯಿಂದ ತಾಳ ಬಡಿಯುತ್ತಾ ನೀರು ಸುರಿದರೆ, ಹಂಡೆಗಟ್ಟಲೆ ನೀರಾದರೂ ಅವನಿಗೆ ಸಾಲದು.

ಮೊದಲು ನಾನು ಮಕ್ಕಳೆಂದರೆ ಬಲು ಸಿಡುಕುತ್ತಿದ್ದೆ. ಹತ್ತಿರಕ್ಕೆ ಬಂದರೆ ಓಡಿಸುತ್ತಿದ್ದೆ. ಅತ್ತರೆ, ನಮ್ಮ ತಾಯಿ ಇಲ್ಲವೆ ಅಕ್ಕಂದಿರಿಗೆ ಜೋರು ಮಾಡಿ, "ಈ ಶನಿಕಾಟ ತಪ್ಪಿಸಿ" ಎಂದು ಕಿರುಚುತ್ತಿದ್ದೆ. ಆದರೂ, ಅವಕ್ಕೆ ಅಲಂಕಾರ ಮಾಡಿದಾಗ, ಮತ್ತೆ ನನಗೆ ಬೇಜಾರಾದಾಗ, ಯಾರಾದರೂ ಎತ್ತಿಕೊಂಡಿದ್ದರೆ, ಹತ್ತಿರ ಹೋಗಿ, ಕೆನ್ನೆ ಚಿಗುಟಿ, ಅಳಿಸಿ ಮುತ್ತಿಡುತ್ತಿದ್ದೆ. ಅಕ್ಕಂದಿರು ಅವರವರ ಮನೆಗಳಲ್ಲಿ ಪೂರ್ತಿ ನೆಲೆಸಿದ ಮೇಲೆ, ಅಮ್ಮನೂ ತನ್ನ ಲೋಕವನ್ನು ಮುಟ್ಟಿದ ಮೇಲೆ, ಅತ್ತಿಗೆಯ ಹತ್ತಿರ ಇರತೊಡಗಿದ ಅನಂತರ, ಮಕ್ಕಳು ಎಷ್ಟೇ ದೊಂಬಿ ನಡೆಸಿದರೂ, ಜೊತೆಗೆ ಅತ್ತಿಗೆಯೂ ಸೇರಿದರೂ, ನನ್ನ ಕೋಪ ತಾಪ ಜಂಬ ಎಲ್ಲವನ್ನು ಕಟ್ಟಿಟ್ಟು, ತಲೆ ತಗ್ಗಿಸಿಕೊಂಡು, ಮೌನವಾಗಿ ಗಂಟಲಲ್ಲೇ ತಡೆದಿಡುತ್ತಿದ್ದೆ. ಪಕ್ಕದ ಮನೆಯ ಹೆಂಗಸರು ಬಂದು ಮಾತಾಡು

ವಾಗ, ಅತ್ತಿಗೆಯನ್ನು ಮಾತಾಡಗೊಡಿಸುವುದಿಲ್ಲವೆಂದು ಲೆಕ್ಕ ಮಾಡುವ ವೇಳೆಗೆ ಸರಿಯಾಗಿ, ಪಕ್ಕದಲ್ಲಿಯೇ ಚಾಪೆಯ ಮೇಲೆ "ತಧ್ಧಿತ . . . ತಧ್ಧಿತ . . . ತೋಂ ತೋಂ" ತಾಳವನ್ನು ಕಾಲುಗಳಿಂದ ಬಡಿಯುತ್ತಾ "ಸಾ ಪಾ ಸಾ . . . . ಸಾ ಪಾ ಸಾ" ಕೂಗುವಂತೆ ಮಾಡಿಟ್ಟು, "ಸ್ವಲ್ಪ ನೋಡಿಕೋ ಗಂಗಾ" ಎಂದು ಹೇಳಿದರೆ, ಏನೊಂದೂ ಮಾತಾಡದೆ, "ಟಪಾ ಟಪಾ" ಕಿವಿಯ ಮೇಲೆ ಬಡಿಯುತ್ತಾ ಅವಕ್ಕೆ ನಿದ್ದೆ ಬರುವ ವರೆಗೂ ಜಪ ಮಾಡುತ್ತಿದ್ದೆ. ಹಾಗೆಯೇ ದಿನದಿನವೂ, ಒಂದೊಂದಾಗಿ, "ಸ್ವಲ್ಪ ನೀರು ಹಾಕು ಬಾಮ್ಮಾ . . . . ಸ್ವಲ್ಪ ಕೆಂಡ ತಾಮ್ಮಾ . . . ಸಾಂಬ್ರಾಣಿ ಅಗೋ ಅಲ್ಲೇ ಕಾಣುತ್ತೆ, ತಂದು ಹಾಕಮ್ಮಾ . . . . ಒಂದೇ ನಿಮಿಷ ಪದ ಹೇಳಿಕೊಂಡು ತೂಗಮ್ಮಾ (ಆ ಹೆಣ್ಣು ಮಕ್ಕಳೋ! ನಾನು ಪದ ಹೇಳುವುದಕ್ಕೆ ಮುಂಚೆಯೆ, ನನಗೇ 'ಲಾಲಿ ಲಾಲೀ' ಹಾಡಿಸುತ್ತಿದ್ದರು!) . . . . ಇಗೋ ಬಂದೆ, ಈ ಲೋಟದಲ್ಲಿ ಹಾಲು ಸುಡುತ್ತಾ ಇದೆ, ಸ್ವಲ್ಪ ತಣ್ಣಗಾದಾಗ ಕುಡಿಸಿಬಿಡಮ್ಮಾ . . . . ಇಲ್ಲೇ ಅಂಗಿ ಇದೆ, ತಗೊಂಡು ತೊಡಿಸಮ್ಮಾ . . . . ನಾನು ಅನ್ನ ಬಸಿಬೇಕು, ಸ್ವಲ್ಪ ಎತ್ತಿಕೊಂಡು ತಿರುಗಾಡಮ್ಮಾ . . . . ದೇವಸ್ಥಾನಕ್ಕೆ ಹೋಗಬೇಕು, ಸ್ವಲ್ಪ ಹೊತ್ತು ಆಡಿಸುತ್ತಿರಮ್ಮಾ . . . . ಊರಿಗೆ ಕರೆದುಕೊಂಡುಹೋದರೆ ನನ್ನ ಗೋಳಾಡಿಸುತ್ತಾರೆ, ನಾನು ಬರೋತನಕ ಕೊಂಚ ಜೋಪಾನವಾಗಿ ನೋಡಿಕೋಮ್ಮಾ . . . . !" ಮುಂತಾಗಿ ನಯವಾದ ವಿಚಕ್ಷಣೆಯಿಂದ ಪಳಗಿಸಿದ ಮೇಲೆ ಮಕ್ಕಳೇ ನನ್ನ ಗೆಳೆಯ ಗೆಳತಿಯರಾದರು. ಅಮ್ಮನನ್ನು ಕೂಡ ಬಿಟ್ಟು ನನಗೆ ಮುತ್ತಿಕೊಂಡು, ತಮ್ಮ ಪ್ರಪಂಚಕ್ಕೆ ನನ್ನನ್ನೂ ಕರೆದುಕೊಂಡುಹೋಗುತ್ತಿದ್ದರು. ಆಮೇಲೆ ಅನ್ನಿಸಿತು: "ಅಮ್ಮ ಹೋದ ಮೇಲೆ, ಆ ದೇವರೇನೆ ಹಸುಮಕ್ಕಳ ರೂಪದಲ್ಲಿ ನನ್ನ ಜೊತೆಗೆ ನಗುತ್ತಿದ್ದಾನೆ" ಎಂದು.

"ಮಕ್ಕಳ ಮಾತು" ಎಂದರೆ ಸ್ವರ್ಗದ ಸೂರೆ. ಕೇಳಲು ಇಂಪು. ನುಡಿದರೆ ಸೊಂಪು. ಮರಳುಕಾಡೂ ನಂದನಸದೃಶವಾಗಿ ಮಾರ್ಪಡುತ್ತದೆ. ಕೇಳುತ್ತಿರುವಾಗ, ಜಗತ್ತಿನಿಂದ ಬಹುದೂರಕ್ಕೆ ಒಯ್ದು ಅತಿ ಆನಂದ ಕೊಡುತ್ತದೆ. ಅದಕ್ಕಾಗಿಯೇ, ಮೇಧಾಶಕ್ತಿಗೆ ಚರಮಸೀಮೆಯಾದ ನಮ್ಮ ಪೂಜನೀಯ ಪಂಡಿತ ನೆಹ್ರೂಜಿ ದಿನದಲ್ಲಿ ಕೆಲವು ಗಂಟೆಗಳ ಕಾಲವನ್ನಾದರೂ

ಮಕ್ಕಳ ನಡುವೆ ಮಗುವಾಗಿ ಹಾಡಿ, ಕುಣಿದು, ಉತ್ಸಾಹದಿಂದ ತಮ್ಮ ಕರ್ಮ ಕ್ಷೇತ್ರಕ್ಕೆ ಧಾವಿಸುತ್ತಾರೆ.

ಯೋಗಿ ಲೆಡ್‌ಬೀಟರ್ ಮಕ್ಕಳ ಮನೋವಿಜ್ಞಾನವನ್ನು ಗ್ರಹಿಸಿ, ಸಾಧಾರಣವಾಗಿ ಎಲ್ಲರಿಗೂ ಸುಲಭವಾಗಿ ಅರ್ಥವಾಗುವಂತೆ, ಮಕ್ಕಳೊಂದಿಗೆ ಹೇಗೆ ವರ್ತಿಸಬೇಕು" ಎಂಬ ಪುಸ್ತಕವನ್ನು ಬರೆದಿದ್ದಾರೆ. ಹಸುಳೆ ರೂಪಿ ನಾದ ಆತ್ಮಕ್ಕೆ ಅಖಂಡ ಶಕ್ತಿಯುಂಟು. ಆ ದೈವೀಶಕ್ತಿಯಿಂದಲೇ ಮಕ್ಕಳ ಮುದ್ದುಮುದ್ದಾದ ತೊದಲುಮಾತಿನಿಂದ ದೂರವಿರಲು ಗಾಂಧೀಜಿ ಇಷ್ಟಪಡು ತ್ತಿರಲಿಲ್ಲ. ಅಡಿಯಾರ ಕ್ಷೇತ್ರದಲ್ಲಿ ಭಾರತದ ಕಲೆಗೆ ಪ್ರತೀಕದಂತಿರುವ ಶ್ರೀಮತಿ ರುಕ್ಮಿಣಿ ಅರುಂಡೇಲರು ರಜಾದಿನಗಳಲ್ಲಿ ಕ್ಷೇತ್ರದಲ್ಲಿರುವುದು ಬಹು ನುಸ್ತರವೆಂದೂ, ಮಕ್ಕಳ ಮಾತು ಕೇಳದಿದ್ದರೆ ಮಾನವನ ಬದುಕು ಹಠಾತ್ತನೆ ನಿಲ್ಲುತ್ತದೆಂದೂ ಹೇಳಿದ್ದಾರೆ.

ಭಗವಂತನ ಎಲ್ಲ ರೂಪಿಗಿಂತಲೂ ಕೃಷ್ಣಾವತಾರದ ರೂಪ ಹೆಚ್ಚು ಪ್ರಿಯ. ಅದರಲ್ಲೂ 'ಬಾಲಕೃಷ್ಣ' ಲೋಕಕ್ಕೆಲ್ಲಾ ಮೋಹನ! ಆ ಅವತಾರ ದ್ವಾಪರಕ್ಕೇ ಮುಕ್ತಾಯವಾಗಿದ್ದರೆ, ಭೂಗ್ರಹಕ್ಕೆ ಭಯಂಕರ ಸಿಡಿಲು ಬಡಿದು, ಅದು ಈ ತನಕ ಉಳಿಯುತ್ತಿರಲಿಲ್ಲ. 'ಕಲಿ'ಯ ಆದಿಯಿಂದ ಇಂದಿಗೂ, ಮನೆಮನೆಗಳಲ್ಲಿಯೂ ಗುಡಿಸಿಲುಮಹಲುಗಳಲ್ಲಿಯೂ ಕಮ್ಮಾರನ ಕುಲುಮೆಯ ಬಳಿಯಲ್ಲೂ ಬಾಲಕೃಷ್ಣನ ಮಧುರವಾಣಿ ಕೇಳಿಬರುತ್ತಿದೆ. ಅದಕ್ಕೋಸ್ಕರವೇ, ಅಕಸ್ಮಾತ್ ಬೇಸತ್ತ ಶ್ರೀ ಪು. ತಿ. ನರಸಿಂಹಾಚಾರ್ಯರು "ನಿಲ್ಲಿಸದಿರು ವನಮಾಲಿ ನಿನ್ನ ಕೊರಳ ಗಾನವಾ" ಎಂಬ ತಮ್ಮ ಮಧುರ ಕವಿತೆಯಲ್ಲಿ ಕೃಷ್ಣನನ್ನು ಅಂಜಲಿಬದ್ಧರಾಗಿ ಪ್ರಾರ್ಥಿಸುತ್ತಿದ್ದಾರೆ.

ಅಪ್ರತಿಮವಾದ ಶಕ್ತಿಯುಳ್ಳ ಮಕ್ಕಳ ಮಾತಿಗೆ ಸೋಲದೆ ನಾನು ಗೆಲ್ಲಲು ಸಾಧ್ಯವೆ? ಅದರಲ್ಲೂ ನಮ್ಮಣ್ಣನ ಮಗ ತುಂಟ ರಾಜಶೇಖರ ನನ್ನನ್ನು ಪೂರ್ತಿ ಸೋಲಿಸಿಯೇ ಬಿಟ್ಟಿದ್ದಾನೆ. ಅವನಿಗೆ ಮನೆಯ ಎಲ್ಲಾ ಹೆಂಗಸರೂ ಕೆಲವು ಸಲ ಗಂಡಸರೂ, "ಅಮ್ಮ" ನೇ! ಎರಡೂವರೆ ವರ್ಷದ ರಾಜುವಿಗೆ, ಸಮಯದಲ್ಲಿ ಸರಿಯಾದ ಉತ್ತರಕೊಡಲಾರದೆ ನೆಪ ಹೇಳಬೇಕಾಗುತ್ತದೆ. ಇಲ್ಲವೆ ಮರೆಮಾಚಿಸಿ, ಯಾವುದಾದರೂ ಬಣ್ಣಬಣ್ಣದ ಆಕರ್ಷಣೀಯವಾದ ವಸ್ತುವನ್ನು ಕೊಟ್ಟು, ಗಂಟೆಗಳ ತನಕ ಉತ್ತರವನ್ನು ಹುಡುಕಬೇಕಾಗುತ್ತದೆ.

ರಾಜು, "ಥ್ರಿಯು" ಅಂದಾಗ, ನೀರು ಕೊಡದಿದ್ದರೆ, ಅವನಿಗೆ ಸಿಟ್ಟು ಬಂದುಬಿಡುತ್ತೆ. ಆ ಸಿಟ್ಟಿನ ಉದ್ರೇಕದಲ್ಲಿ ಇನ್ನೂ ತೊದಲಿಸಿಕೊಂಡು ಬೈಯಲು ಪ್ರಾರಂಭಿಸಿದರೆ, ಕೇಳಿ ನಗದವರಿಲ್ಲ, ಎಲ್ಲಕ್ಕಿಂತಲೂ ಅವನ ಮುದ್ದು ಸಿಟ್ಟೇ ಚಂದ. ತನಗಿಂತಲೂ ದೊಡ್ಡವರಾದ ನಂದಿ, ಕೋಮಲೆ ಇವರೆಂದರೆ ಅವನಿಗೆ ಲಕ್ಷ್ಯವೇ ಇಲ್ಲ. ಅವರ ಮೇಲೆ ದೂರು ತರುವಾಗಿನ ಜೋರುಮಾತಿನಲ್ಲಿ ಒಡೆತನ ಎದ್ದು ಕಾಣುತ್ತದೆ. ನ್ಯಾಯಾಧೀಶನಂತೆ ಅವರನ್ನೆಲ್ಲಾ 'ಹೊಡೆ' ಎಂದು ಕೋಲು ತಂದುಕೊಡುತ್ತಾನೆ. ನಾನು ಒಪ್ಪದಿದ್ದರೆ "ಊ ದಾರ, ದಾರ," ಎಂದು ನಾನೇ ತನಗೆ 'ಬೇಡ' ಎನ್ನುತ್ತಾನೆ. ಸಮಯ ಸಾಧಿಸಿಕೊಂಡು ಅವರೂ ಬಿಡಪೆ, "ರಾಜು ತುಂಟ" ಎಂದು, ತಾವೇ ಹರಿದು ಹಾಕಿಯೋ ಅಥವಾ ಅವನೇ ಹರಿದ ಮೇಲೋ ಪುಸ್ತಕ ತೋರಿಸಿ, 'ಇವನೇ! ಇವನೇ!' ಎನ್ನುತ್ತಾ, ಕಳ್ಳನನ್ನು ಹಿಡಿದ ಪೋಲೀಸು ಜನರಂತೆ ಒಟ್ಟಾಗುವಾಗ, ಅವನು 'ಇಲ್ಲ' ಎಂದು ಅಸಮ್ಮತಿ ತೋರಿಸಿ ಬಚಾಯಿಸಿಕೊಳ್ಳುತ್ತಾ ಇರುವ ನೋಟ ಕರುಣೆ ತರುತ್ತದೆ.

ಪ್ರತಿಯೊಂದು ಕೆಲಸ ಮಾಡುವಾಗಲೂ, ಇವರ ಮೇಲ್ವಿಚಾರಣೆ ತಪ್ಪುವುದಿಲ್ಲ. 'ಹೂ'ಗುಟ್ಟುವುದನ್ನು ನಿಲ್ಲಿಸಿದರೆ, ಜಡೆಯನ್ನೇ ಹಿಡಿದು ಜಗ್ಗಿಸುತ್ತಾ, ಇಲ್ಲವೇ ಪ್ರಹರಿಸುತ್ತಾ, ವಿವರಣೆ ಕೇಳುತ್ತಾರೆ. ನಾನು ಕೋಪದ ನಟನೆ ಮಾಡಿದರೆ, ಅವರು ಇನ್ನೂ ಹೆಚ್ಚು ಕೋಪ ತೋರಿಸಿ, 'ಬಾಲ ಲೀಲೆಯ ತೆರದಿ ಜಾಲವನು ಅಳಿವಂತೆ' ಎಂಬ ಪ್ರಕರಣ ಪ್ರಾರಂಭವಾಗುತ್ತಲೂ, ಸೋಲದೆ ವಿಧಿಯಿಲ್ಲ. ವಿಜ್ಞಾನದ ವಿದ್ಯಾರ್ಥಿಗಳಾದರೂ ಸ್ವಲ್ಪ ಪ್ರಶ್ನೆಮಾಡಿ, ಅಷ್ಟರಲ್ಲೆ ತೃಪ್ತಿಪಡುತ್ತಾರೆ; ಆದರೆ ಇವರಿಗೆ ವಿವರಿಸಬೇಕಾದರೆ 'ಬಾಲ ಮನೋ ವಿಜ್ಞಾನ'ದ ಜೊತೆಗೆ ಇನ್ನೂ 'ಇತರ ವಿಜ್ಞಾನ' ಶಾಸ್ತ್ರಗಳ ಆಧಾರಗಳೂ ಬೇಕಾಗುತ್ತವೆ. ಅನೇಕ ಸಲ ಪ್ರಯೋಗ ತೋರಿಸಲು ಅಸಮರ್ಥಳಾಗುತ್ತೇನೆ. ಇಲ್ಲವೆ, ಅವರ ಮಾತನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಹೋದರೆ, ನನ್ನನ್ನೇ ನೋಡಿ ನೋಡಿ ನಗುತ್ತಾರೆ!

ಮನೆಯೊಳಕ್ಕೆ ಹೊರಗಿನಿಂದ ಹಿರಿಯರು ಯಾರೇ ಬರಲಿ, ಮಕ್ಕಳನ್ನು ಕಾಣದೆ, ಅವರ ಮಾತು ಕೇಳಿ ಸ್ವಲ್ಪ ಹೊತ್ತು ಕಳೆಯದೆ ಯಾವ ಕೆಲಸವನ್ನೂ ಉಲ್ಲಾಸದಿಂದ ಮಾಡುವುದಿಲ್ಲ.

ಮಕ್ಕಳ ಮಾತು ಹೆಚ್ಚಾಗಿ ಸಂಜ್ಞೆಯ ಮಾತುಗಳೇ. ಅವರ ಭಾಷೆ ದಿನದಿನಕ್ಕೂ ಹೊಸದೇ, ದಿನದಿನಕ್ಕೂ ಮಧುರವೇ! ಅವರ ಹೊಸ ಭಾಷೆಗೆ ಸಾಹಿತ್ಯ ಹೆಚ್ಚು ಹುಟ್ಟಿಲ್ಲ. ಅವರ ಸ್ವರದಲ್ಲಿ ಸಂಗೀತ ತುಂಬಿ, ಮನಸ್ಸನ್ನು ಆಕರ್ಷಿಸುತ್ತದೆ. ಪಕ್ಷಿಗಳ ಕಲಕಲ ರವವೂ ಕೂಡಿ, ವಸಂತ ಋತುವಿನ ಸುಂದರತೆಯಿಂದ ಎಲ್ಲರನ್ನೂ ಚೇತನಗೊಳಿಸಿ, ಸೋತ ಹೃದಯಕ್ಕೆ ಅದು ನಲಿವು ಹಿಗ್ಗು ಕೊಡುತ್ತದೆ. ಇವರ ಜೊತೆ ಬಿಟ್ಟರೆ ನನಗೆ ಬೇರೆ ಯಾರೂ ಗೆಳೆಯರೇ ಇಲ್ಲ! ಇವರ ಸ್ನೇಹಕ್ಕಿಂತ ಮತ್ತೆ ಯಾರ ಸ್ನೇಹದಲ್ಲೂ ನನಗೆ ವಿಶ್ವಾಸವಿಲ್ಲ, ಇಷ್ಟವಿಲ್ಲ. ಇವರ ಮಾತಿನಲ್ಲಿ ಅಣಕವಿಲ್ಲ, ಆಡಂಬರವಿಲ್ಲ, ತಿರಸ್ಕಾರವಿಲ್ಲ, ಸ್ಪರ್ಧೆಯಿಲ್ಲ, ಮೋಸವಿಲ್ಲ, ಸ್ವಾರ್ಥವಿಲ್ಲ, ಕ್ರೌರ್ಯವಿಲ್ಲ, ಭೀತಿಯಿಲ್ಲ, ಅಸಾಮರ್ಥ್ಯವಿಲ್ಲ, ಅಧೈರ್ಯವಿಲ್ಲ! ಎಲ್ಲವೂ ಸ್ವಚ್ಛ, ಸುಶೀಲ, ಜೊತೆಗೆ ಅಮೃತ. ಅಪಾರವಾದ ವಿಶ್ವಾಸ ತುಂಬಿರುತ್ತದೆ ಮಕ್ಕಳ ಮಾತಿನಲ್ಲಿ. ಆಕಾಶದಲ್ಲೆಲ್ಲಾ ಸಂಚರಿಸುತ್ತಾರೆ! ಜೀವನದ ಹೊತ್ತನ್ನೆಲ್ಲಾ ಹಗುರವಾಗಿ ಕಳೆಯುತ್ತಾರೆ. ಮನೆಯಲ್ಲೆಲ್ಲ ಅಂಗಳದಲ್ಲೆಲ್ಲ ಚಿಲಿಪಿಲಿಗುಟ್ಟುತ್ತಾ ಮಂಗಳಕರವಾಗಿ ಕಿವಿಯನ್ನು ತುಂಬಿಸುತ್ತಾರೆ. ನಗೆಗಡಲು ಸದಾ ಹರಿಯುತ್ತದೆ ಮಕ್ಕಳ ಮಾತಿನಲ್ಲಿ.

—ಚಿ. ನಂ. ಗಂಗಾದೇವಿ.

## ಮಾಯಾದೇವಿಯ ಬಾಲ್ಯವರ್ಣನೆ

(ಚಾಮರಸ ಕವಿಯ ಪ್ರಭುಲಿಂಗಲೀಲೆಯಿಂದ)

ಹಲಗೆ ಮಾಣಿಕದೊಟ್ಟಿಲಲಿ ಮು-
ಗ್ಗುಲಿಸಿ ಮಲಗಿ ನಿರೀಕ್ಷಿಸುತ ಮಾ-
ರ್ಪೊಳೆವ ತನ್ನನೆ ಕಂಡು ನಲಿವುತ ನಗುತ ಕೈದುಡುಕಿ |
ಸೆಳೆದು ತೆಗೆದಡೆ ಬಾರದಿರಲಾ-
ನೆಳಲನೊದೆವುತ ಕಾಲಗೆಜ್ಜೆಗ-
ಳುಲುಹನಾಲಿಪ ಮಾಯೆ ಮೆರೆದಳು ಬಾಲಲೀಲೆಯಲಿ ||

# ತರಗತಿಯ ಕಿಟಕಿಯಿಂದಾಚೆ

ನಮ್ಮ ತರಗತಿ ನಡೆಯುವುದು ಗಣಿತ ಭವನದ ಮೇಲುಪ್ಪರಿಗೆಯ ನಾಲ್ಕು ಐದು ಕೊಠಡಿಗಳಲ್ಲಿ ಮಾತ್ರ. ನಮ್ಮ ಕಾಲೇಜಿನ ಮೂರು ವರ್ಷಗಳ ಜೀವನ, ಸ್ವಲ್ಪ ಹೆಚ್ಚು ಕಡಮೆ ಗಣಿತ ಭವನದ ಮೇಲಂತಸ್ತಿನಲ್ಲೇ. ಏಕೆಂದರೆ, ನಾವು ಇತರ ಸಾಮಾನ್ಯ ವಿದ್ಯಾರ್ಥಿಗಳ ಗುಂಪಿಗೆ ಸೇರಿದವರಲ್ಲ. ಅವರಂತೆ ನಾವು ಕಟ್ಟಡದಿಂದ ಕಟ್ಟಡಕ್ಕೆ ಘಂಟೆಘಂಟೆಗೂ ಅಲೆಯಬೇಕಾಗಿಲ್ಲ. ಉಪಾಧ್ಯಾಯರಿಗೂ ತಮಗೂ ನಿಕಟವಾದ ಪರಿಚಯವಿಲ್ಲದೆ, 'ಗುಂಪಿನಲ್ಲಿ ಗೋವಿಂದ' ಎಂಬಂತೆ ಕಾಲ ಕಳೆಯುವವರಲ್ಲ. ನಾವು ಇಂಗ್ಲಿಷ್ ಆನರ್ಸ್ ವಿದ್ಯಾರ್ಥಿಗಳು. ನಮ್ಮ ತರಗತಿಯಲ್ಲಿ ಇರುವವರು ಕೇವಲ ಹದಿನೈದು ಮಂದಿ. ಮೇಲೆ ಹೇಳಿದಂತೆ ನಮಗೆ ತರಗತಿಗಳು ನಡೆಯುವುದು ನಾಲ್ಕು, ಐದು ಕೊಠಡಿಗಳಲ್ಲಿ ಮಾತ್ರ. ಇವರಲ್ಲಿ ನಾಲ್ಕು ಕೊಠಡಿಗಳಲ್ಲಿ ತರಗತಿ ನಡೆದರೆ, ಕಿಟಕಿಯಿಂದಾಚೆ ದೃಷ್ಟಿ ಹೊರಳಿಸಿ, ಹೊರಗಿನ ದೃಶ್ಯಗಳನ್ನು ನೋಡಬಹುದು. "ಸೈನ್ಸ್" ವಿಭಾಗದ ವಿದ್ಯಾರ್ಥಿಗಳಂತೆ ನಿಮಿಷವೂ ಪುರುಸೊತ್ತಿಲ್ಲದೆ ಟಿಪ್ಪಣಿ ತೆಗೆದುಕೊಳ್ಳುವ ಅವಶ್ಯಕತೆ ನಮಗಿಲ್ಲ. ಆದರಿಂದ ನಾವು ಆಗಾಗ್ಗೆ ಕಿಟಕಿಯಿಂದಾಚೆ ನೋಡಬಹುದು. ನಮಗೆ ಇದು ಒಂದು ಅಭ್ಯಾಸವೇ ಆಗಿಹೋಗಿದೆ.

ತರಗತಿಯ ಕಿಟಕಿಯಿಂದಾಚೆ ನೋಡುವ ವಿಷಯದಲ್ಲಿ ನನಗೆ ಒಂದು ಕಟು ಅನುಭವ ಕೂಡ ಆಗಿದೆ. ಆ ದಿನ ಪ್ರಾಧ್ಯಾಪಕರ ತರಗತಿ ನಡೆಯುತ್ತಿತ್ತು. ನಾನು ಕಿಟಕಿಯ ಹತ್ತಿರವೇ ಕುಳಿತಿದ್ದೆ. ಪಾಠವನ್ನು ಗಮನವಿಟ್ಟು ಕೇಳುತ್ತಿದ್ದೆ. ಆದರೆ ಒಂದೇ ಸಮನೆ ಪ್ರಾಧ್ಯಾಪಕರ ಮುಖವನ್ನೇ ನೋಡುತ್ತಾ ಕುಳಿತಿರುವುದು ನನಗೆ ಅಸಾಧ್ಯವಾಯಿತು. ನಮ್ಮ ತರಗತಿ ಚಿಕ್ಕದಾದ್ದರಿಂದ ಇನ್ನಾವ ಕಡೆಗೂ ದೃಷ್ಟಿ ಹೊರಳಿಸುವಂತಿರಲಿಲ್ಲ. ಕಿಟಕಿಯಿಂದಾಚೆ ನೋಡಿದೆ. ಸ್ವಲ್ಪ ಹೊತ್ತು ಹಾಗೆಯೇ ನೋಡುತ್ತಾ ಕುಳಿತೆ. ಹಾಗೆಂದರೆ ನಾನು ಪಾಠವನ್ನು ಕೇಳುತ್ತಿರಲಿಲ್ಲವೆಂದಲ್ಲ. ಹೊರಗೆ ದೃಷ್ಟಿಯನ್ನು ನೆಟ್ಟಿದ್ದರೂ, ಅವರ ಭಾಷಣವನ್ನು ಗಮನವಿಟ್ಟು ಕೇಳುತ್ತಲೇ ಇದ್ದೆ. ಇದ್ದಕಿದ್ದ ಹಾಗೆಯೇ ಅವರು ಭಾಷಣವನ್ನು ನಿಲ್ಲಿಸಿ, ಹೊರಗೆ ಹೋಗುವಂತೆ ನನಗೆ ಆಜ್ಞಾಪಿಸಿದರು. ತಪ್ಪು ನನ್ನದಾಗಿತ್ತು. ತುಟಿ ಪಿಟಕ್ಕೆನ್ನದೆ ಎದ್ದು ಹೊರಗೆ ಬಂದೆ. ಅವೊತ್ತಿನಿಂದ

ಅವರ ತರಗತಿಯಲ್ಲಿ ವಿಶೇಷ ಜಾಗರೂಕತೆ ವಹಿಸುತ್ತೇನೆ. ಪುಸ್ತಕವಿದ್ದರೆ ಅದನ್ನು ನೋಡುತ್ತಾ ಕುಳಿತಿರುವುದು; ಇಲ್ಲದಿದ್ದರೆ, ಉಪಾಧ್ಯಾಯರ ಮುಖವನ್ನೇ ಬಹಳ ಕುತೂಹಲದಿಂದ ನೋಡುತ್ತಾ ಕುಳಿತಿರುವುದು. ಆದರೆ ಇತರ ಉಪಾಧ್ಯಾಯರ ತರಗತಿಗಳಲ್ಲಿ ನಮಗೆ ಸ್ವಲ್ಪ ಹೆಚ್ಚಿನ ಸ್ವಾತಂತ್ರ್ಯ ಸಿಕ್ಕುತ್ತದೆ. ನಾವು ಆಗಾಗ್ಗೆ ಕಿಟಕಿಯ ಹೊರಗೆ ನೋಡುತ್ತಿದ್ದರೆ, ನಮ್ಮ ಮೇಲಿನ ಕರುಣೆಯಿಂದಲೋ ಅಥವಾ ಮಾನವಸಹಜವಾದ ದೌರ್ಬಲ್ಯಗಳ ಅರಿವಿನಿಂದಲೋ ಅವರು ನಮ್ಮನ್ನು ಕ್ಷಮಿಸುತ್ತಾರೆ.

ತರಗತಿಯ ಕಿಟಕಿಯಿಂದಾಚೆ ನೋಡುವುದು ಕೇವಲ ಅಭ್ಯಾಸವೊಂದೇ ಅಲ್ಲ; ಅದು ಒಂದು ಅವಶ್ಯಕತೆಯಾಗಿಬಿಟ್ಟಿದೆ. ಇದಕ್ಕೆ ಅನೇಕ ಕಾರಣಗಳಿವೆ: ನಮಗೆ ಇಟ್ಟಿರುವ ಎಲ್ಲಾ ಪಠ್ಯಪುಸ್ತಕಗಳೂ ಸಿಗುವುದಿಲ್ಲ. ಆದ್ದರಿಂದ ಅವುಗಳನ್ನು ತರಗತಿಗೆ ತರಲೇಬೇಕೆಂಬ ನಿರ್ಬಂಧವೂ ಇಲ್ಲ. ಆದಕಾರಣ ನಾವೆಲ್ಲರೂ ತೆರೆದ ಪುಸ್ತಕವನ್ನೇ ನೋಡುತ್ತಾ ಕುಳಿತಿರುವಂತಿಲ್ಲ. ಅಥವಾ ಉಪಾಧ್ಯಾಯರ ಮುಖವನ್ನೇ ಎವೆಯಿಕ್ಕದೆ ನೋಡುವುದು ಹೆಚ್ಚು ಹೊತ್ತು ಸಾಧ್ಯವಾಗುವುದಿಲ್ಲ. ಇನ್ನು, ಕೊಠಡಿಯ ನಾಲ್ಕು ಗೋಡೆಗಳನ್ನೋ ಮೂಲೆಗಳನ್ನೋ ಬೆಂಚು ಕುರ್ಚಿಗಳನ್ನೋ ನೋಡುತ್ತಾ ಕುಳಿತಿರಬೇಕಾಗುತ್ತದೆ. ಆದರೆ ಇದು ನಮಗೆ ಅಸಾಧ್ಯದ ಕೆಲಸ. ಮೂರು ವರ್ಷಗಳಿಂದಲೂ ಅದೇ ಗೋಡೆಗಳು, ಅದೇ ಮೂಲೆಗಳು, ಅದೇ ಬೆಂಚು ಕುರ್ಚಿಗಳು, ಇವುಗಳನ್ನು ನೋಡಿ ನೋಡಿ ಬೇಸತ್ತಿದ್ದೇವೆ. ಅವುಗಳನ್ನೇ ಶೂನ್ಯ ದೃಷ್ಟಿಯಿಂದ ನೋಡಿದರೆ ನನಗೆ ಒಂದು ರೀತಿಯ ಅಸಹ್ಯ ವೇದನೆಯಾಗುತ್ತದೆ. ಆದ್ದರಿಂದ ಕಿಟಕಿಯಿಂದಾಚೆ ನೋಡದೆ ಗತ್ಯಂತರವೇ ಇಲ್ಲ.

ಎರಡು ಕೊಠಡಿಗಳಲ್ಲಿ ಕಿಟಕಿಯಿಂದಾಚೆ ನೋಡಿದರೆ ನಮಗೆ ಕಾಣುವುದು ಒಂದು ವಿಶಾಲವಾದ ಹಸಿರುಮೈದಾನ. ದೂರದಲ್ಲಿ, ಮೈದಾನದ ಒಂದು ಕೊನೆಯಲ್ಲಿ ಒಂದು ಮರ, ಅದರ ಕೆಳಗೆ ಒಂದು ಕಲ್ಲು ಬೆಂಚು. ಅದರಿಂದಾಚೆ ಟಾರು ರಸ್ತೆ, ರಸ್ತೆಯಿಂದಾಚೆ ಸೆಂಟ್ರಲ್ ಜೈಲಿನ ಎತ್ತರವಾದ ಗೋಡೆ. ಎಲ್ಲಕ್ಕಿಂತ ಮಿಗಿಲಾಗಿ ಮೇಲ್ಗಡೆ, ವಿಶಾಲವಾದ ಅನಂತವಾದ ನೀಲಾಕಾಶ. ಒಂದುಕಡೆ ಪಕ್ಕದಲ್ಲಿ ಹವಾಮಾನ ಕಛೇರಿಯ ಕಟ್ಟಡ, ಅದರ ಮೇಲೆ ಯಾವಾಗಲೂ ಸುತ್ತುತ್ತಿರುವ ಗಾಳಿಯ ವೇಗವನ್ನಳೆಯುವ ಯಂತ್ರ.

ಪ್ರಾಧ್ಯಾಪಕರ ಕೊಠಡಿಯಿಂದ ನಮಗೆ ಕಾಣುವುದು, ಹೆಮ್ಮೆಯಿಂದ ತಲೆಯೆತ್ತಿ ನಿಂತಿರುವ, ದಿಗಂತದ ವರೆಗೂ ಹಬ್ಬಿರುವ, ಈ ಕಲ್ಯಾಣ ನಗರದ ಭವ್ಯ ಕಟ್ಟಡಗಳು. ಇನ್ನೊಂದು ಕೊಠಡಿಯಿಂದ ನೋಡಿದರೆ ನಮ್ಮ ಕಾಲೇಜಿನ ಭೂಗರ್ಭ ಶಾಸ್ತ್ರದ, ಭೌತ ಶಾಸ್ತ್ರದ, ರಸಾಯನ ಶಾಸ್ತ್ರದ ವಿಭಾಗಗಳ ದಿವ್ಯವಾದ ಕೆಂಪು ಕಟ್ಟಡಗಳು. ಮಧ್ಯದ ಕಟ್ಟಡದ ಗೋಪುರದಲ್ಲಿರುವ ದೊಡ್ಡ ಗಡಿಯಾರವೂ ನಮ್ಮ ದೃಷ್ಟಿಗೆ ಗೋಚರವಾಗುತ್ತದೆ. ಮತ್ತು ಕಿಟಕಿಯ ಹತ್ತಿರವೇ ಇರುವ ಮರದ ರೆಂಬೆಗಳು, ಒಳಗೇನು ನಡೆಯುತ್ತಿದೆ ಎಂಬ ಕುತೂಹಲದಿಂದಲೋ ಎಂಬಂತೆ ಕಿಟಕಿಯ ಹತ್ತಿರವೇ ಮೊಗಚಾಚಿ ನಿಂತಿವೆ.

ಇದನ್ನು ಕೇಳಿ ನೀವು ಪ್ರಶ್ನಿಸಬಹುದು: "ಈ ದೃಶ್ಯಗಳಲ್ಲೇನು ಮಹಾ ಸೊಗಸಿದೆ? ಇದರಲ್ಲೇನು ವಿಶೇಷತೆಯಿದೆ? ನೀವು ಇವುಗಳನ್ನು ನೋಡುತ್ತಾ ಕುಳಿತರೆ, ಪಾಠಗಳನ್ನು ಅಲಕ್ಷಿಸಿದಂತಾಗುವುದಿಲ್ಲವೆ?" ಎಂದು. ಇದಕ್ಕೆ ನಾನು ನಿಮಗೆ ಸಮರ್ಪಕವಾದ ಉತ್ತರವನ್ನು ಕೊಡಬಲ್ಲೆ. ಮೊದಲನೆಯದಾಗಿ, ನಾನು ಹೊರಗೆ ದೃಷ್ಟಿಯನ್ನು ಸುಳಿಸುತ್ತಿದ್ದರೂ, ಪಾಠವನ್ನು ಗಮನವಿಟ್ಟು ಕೇಳುತ್ತಲೇ ಇರುತ್ತೇನೆ. ಇದು ಹೇಗೆಂದು ನೀವು ಆಶ್ಚರ್ಯಪಡಬಹುದು. ಆದರೆ, ಸ್ವಲ್ಪ ನಿಧಾನಿಸಿ. ನನಗೆ ಸಂಗೀತದ ವಿಷಯದಲ್ಲಿ ಒಂದು ಅನುಭವವಾಗಿದೆ. ನನ್ನ ರೂಮಿನಲ್ಲಿ ಟೇಬಲ್ಲಿನ ಮುಂದೆ ಕುಳಿತು ಓದುತ್ತಿದ್ದಾಗ ಯಾವುದಾದರೂ ಒಳ್ಳೆಯ ರೆಕಾರ್ಡು ಸಂಗೀತ ಅಥವಾ ಬಾಯಿ ಹಾಡುಗಾರಿಕೆ ದೂರದಲ್ಲಿ ಕೇಳಿಬರುತ್ತಿದ್ದರೆ, ಅದರಿಂದ ನನ್ನ ಅಭ್ಯಾಸಕ್ಕೆ ತೊಂದರೆಯಾಗಿಲ್ಲ; ಅದರ ಬದಲು, ಆ ಇಂಪಾದ ಸಂಗೀತದ ಹಿನ್ನೆಲೆಯಲ್ಲಿ ನನ್ನ ಓದಿನ ಮೇಲೆ ಸಂಪೂರ್ಣ ಗಮನವಿಡಬಹುದು. ನಾನು ಎಷ್ಟೋ ಬಾರಿ, 'ಯಾವಾಗಲೂ ಹೀಗೆಯೇ ಸಣ್ಣ ದನಿಯ ಸಂಗೀತವನ್ನು ಕೇಳುತ್ತಾ ಓದುತ್ತಿದ್ದರೆ ಎಷ್ಟು ಚೆನ್ನ?' ಎಂದುಕೊಂಡಿದ್ದೇನೆ. ಆದರೆ ಪಕ್ಕದ ಕೋಣೆಯಲ್ಲಿ ಯಾರಾದರೂ ಟೇಬಲ್ಲನ್ನೋ ಕುರ್ಚಿಯನ್ನೋ ಅಲ್ಲಿಂದಿಲ್ಲಿಗೆ ಎಳೆದು ಕರ್ಕಶವಾದ ಶಬ್ದವನ್ನು ಮಾಡುತ್ತಿದ್ದರೆ, ಎದ್ದು ಹೋಗಿ ಕೆನ್ನೆಗೆ ಎರಡು ಬಿಡೋಣವೆಂದೆನಿಸುತ್ತದೆ. ಇದು, ಸಂಗೀತಕ್ಕೂ ಬರಿಯ ಶಬ್ದಕ್ಕೂ ಇರುವ ವ್ಯತ್ಯಾಸ. ಹಾಗೆಯೇ ನನಗೆ ನಮ್ಮ ತರಗತಿಯ ಕಿಟಕಿಯಿಂದಾಚೆನ ದೃಶ್ಯವು ಕೂಡ ಸಂಗೀತದಂತಿದೆ. ಅಲ್ಲಿ ನಮ್ಮ ನಿಶ್ಚಲತೆಯನ್ನು ಕೆಡಿಸುವ, ಚಿತ್ತಕ್ಷೋಭೆ

ಯನ್ನುಂಟುಮಾಡುವ ಯಾವ ಸಂಗತಿಗಳೂ ಜರುಗುವುದಿಲ್ಲ. ಏಕೆಂದರೆ, ಆ ವಿಶಾಲವಾದ ಮೈದಾನದಾಚೆ ಇರುವ ರಸ್ತೆಯಲ್ಲಿ ಓಡಾಡುವ ಮೋಟಾರುಗಳ ಹಾರನ್ ನಮಗೆ ಕರ್ಕಶವಾಗಿ, ಘಟ್ಟಿಯಾಗಿ ಕೇಳಿಬರುವುದಿಲ್ಲ. ಅವುಗಳ ಶಬ್ದ, ಮಧ್ಯದ ವಿಶಾಲಪ್ರದೇಶವನ್ನು ಹಾಯ್ದು ನಮ್ಮ ಕಿವಿಯನ್ನು ಮುಟ್ಟುವ ಹೊತ್ತಿಗೆ, ಕ್ಷೀಣವಾಗಿ ಅದರ ಕರ್ಣಕಠೋರತೆಯನ್ನು ಕಳೆದುಕೊಂಡಿರುತ್ತದೆ.

ಆ ಮೈದಾನದಲ್ಲಿ ಆ ಕೊನೆಯಿಂದೀಕೊನೆಗೆ ಎರಡು ಮೂರು ಕಾಲು ದಾರಿಗಳಿವೆ. ನಮಗೆ ತರಗತಿಗಳು ನಡೆಯುತ್ತಿದ್ದಾಗ ಆ ದಾರಿಗುಂಟ ನಡೆಯುವವರು ಬಹು ವಿರಳ. ಆದ್ದರಿಂದ ಹೆಚ್ಚು ಕಡಮೆ ನಿರ್ಜನವಾದ ಆ ಪ್ರದೇಶ ನೋಡುವುದಕ್ಕೆ ಒಂದು ರೀತಿ ಸೊಗಸಾಗಿರುತ್ತದೆ. ಬೆಳಗಿನ ಹೊತ್ತು ಸೂರ್ಯನ ಹೊಂಗಿರಣಗಳು ಆ ಹಸಿರು ನೆಲವನ್ನು ಮುತ್ತಿರುವಾಗ ಅದು ಒಂದು ಅಪೂರ್ವ ಶೋಭೆಯಿಂದ ಕಂಗೊಳಿಸುತ್ತದೆ. ಅದರಲ್ಲೂ ಹಿಂದಿನ ರಾತ್ರಿ ಮಳೆ ಬಿದ್ದಿದ್ದರೆ, ಪೃಥಿವಿಯೆಲ್ಲವೂ ಮೈತೊಳೆದುಕೊಂಡು, ಹಸಿರು ಉಡುಪು ತೊಟ್ಟು, ತನ್ನ ಪ್ರಿಯತಮನಾದ ಸೂರ್ಯದೇವನನ್ನು ಪ್ರೀತಿಯಿಂದ ಸ್ವಾಗತಿಸುತ್ತಿರುವಂತೆ ತೋರುತ್ತದೆ. ಮೇಲೆ, ಶುಭ್ರವಾದ ನೀಲಾಕಾಶ; ಅದರಲ್ಲಿ, ದೇವಲೋಕದ ದಾರಿಗರಂತೆ ಮೆಲ್ಲನೆ ನಡೆಯುತ್ತಿರುವ ಬಿಳಿಯ ಮೋಡಗಳು; ಕೆಳಗೆ ಅಚ್ಚ ಹಸಿರಿನ ಮೈದಾನ, ಮಧ್ಯದಲ್ಲಿ ಭಗವಾನ್ ಭಾಸ್ಕರನ ಉಜ್ಜ್ವಲವಾದ ಹೊಂಗಿರಣಗಳು; ಈ ದೃಶ್ಯವನ್ನು ನೋಡುತ್ತಾ ಎಷ್ಟೋ ಸಲ ಮೈಮರೆತಿದ್ದೇನೆ. ಇದನ್ನು ನೋಡುತ್ತಿರುವಾಗ, ಹದಿನೇಳನೇ ಶತಮಾನದಲ್ಲಿದ್ದ ಆಂಗ್ಲ ಕವಿ ಹರ್ಬರ್ಟನ ಕವಿತೆಯೊಂದರ ಈ ಸಾಲುಗಳನ್ನು ಯಾವಾಗಲೂ ಜ್ಞಾಪಿಸಿಕೊಳ್ಳುತ್ತೇನೆ:

> "Sweet day, so cool, so calm, so bright,
> The bridal of the earth and sky."

ನಾವು ಮೇಲಿನ ಅಂತಸ್ತಿನಿಂದ ಈ ದೃಶ್ಯವನ್ನು ನೋಡುವುದರಿಂದ ಅದಕ್ಕೆ ಹೆಚ್ಚಿನ ಸೊಗಸಿದೆ.

ಇಂತಹ ಉಜ್ಜ್ವಲವಾದ ಪ್ರಾತಃಕಾಲದಲ್ಲಿ ನಮ್ಮ ಸಹಪಾಠಿಗಳು ಯಾರಾದರೂ ಹೊತ್ತಾಗಿ ಆ ದಾರಿಗುಂಟ ನಡೆದು ಬರುತ್ತಿದ್ದರೆ, ಅದು ಉಪಾಧ್ಯಾಯರಿಗಿಂತ ಮೊದಲು ನಮಗೆ ಗೊತ್ತಾಗುತ್ತದೆ. ಹಾಜರಿಯನ್ನು ತೆಗೆದುಕೊಳ್ಳುತ್ತಿರುವ ಉಪಾಧ್ಯಾಯರಿಗೆ ಇದು ಗೊತ್ತಿರುವುದಿಲ್ಲ. ಆಗ ನಾವು

ಯಾವುದೋ ಒಂದು ಅಮೂಲ್ಯವಾದ ರಹಸ್ಯವನ್ನು ಕಂಡುಕೊಂಡಿರುವವರಂತೆ ಹೆಮ್ಮೆಪಡುತ್ತೇವೆ. ಆ ಕಾಲುದಾರಿಯನ್ನು ಮುಗಿಸಿ, ಮೆಟ್ಟಿಲುಗಳನ್ನು ಹತ್ತಿ ತರಗತಿಗೆ ಬರುವುದು ಸ್ವಲ್ಪ ಹೊತ್ತಾಗುತ್ತದೆ. ಆಗ ತರಗತಿಯ ಹತ್ತಿರ ಬರುವ ಅವರ ಕಾಲಸಪ್ಪುಳವನ್ನೇ ಕುತೂಹಲದಿಂದ ನಿರೀಕ್ಷಿಸುತ್ತಿರುತ್ತೇವೆ. ಅವರು ಬಂದು, ಬಾಗಿಲನ್ನು ಧಡಾರನೆ ತೆಗೆದು ಒಳಗೆ ಬರುವಾಗ, ಎಲ್ಲರೂ ಆ ಕಡೆ ಕತ್ತು ತಿರುಗಿಸಿ ಅವರನ್ನು ನೋಡಿ, ತಲೆಯ ಮೇಲಿಂದ ಒಂದು ಕರ್ತವ್ಯ ಭಾರವನ್ನು ಇಳುಕಿದವರಂತೆ ಸಮಾಧಾನ ಹೊಂದುತ್ತೇವೆ.

ಎಡಗಡೆ ಪಕ್ಕದ ಕೊಠಡಿಯಲ್ಲಿ ಕ್ಲಾಸ್ ನಡೆಯುವಾಗ, ಕಿಟಕಿಯ ಅಂಚಿನ ಮರದ ರೆಂಬೆಗಳನ್ನೂ ನಮ್ಮ ಕಾಲೇಜಿನ ಇತರ ಕೆಂಪು ಕಟ್ಟಡ ಗಳನ್ನೂ ನೋಡಬಹುದು. ಇದು ಆ ಮೈದಾನದ ದೃಶ್ಯದಷ್ಟು ಸೊಗಸಾಗಿಲ್ಲ ದಿದ್ದರೂ, ನಮಗೆ ಪ್ರಿಯವಾಗಿಯೇ ಇದೆ. ಮರದ ಕೊಂಬೆಗಳ ಮಧ್ಯದಿಂದ ತೂರಿಬರುವ ಕಿರಣಗಳು ಚಿನ್ನದ ಬಲೆಯನ್ನೇ ನೇಯ್ದಿರುವಂತೆ ತೋರುತ್ತದೆ. ಅಲ್ಲದೆ, ಆ ಕೆಂಪು ಕಟ್ಟಡಗಳ ಭವ್ಯತೆ ಮತ್ತು ಸೌಂದರ್ಯ ಹೃದಯ ಸ್ಪರ್ಶಿಯಾಗಿದೆ. ಅವುಗಳನ್ನು ಕಟ್ಟಿದವರ ರಸಿಕತೆ, ಮನಸ್ಸಿನ ಉದಾತ್ತತೆ, ಇವುಗಳ ಪ್ರತೀಕಗಳಾಗಿ ನಿಂತಿವೆ. ಅವು, ಈಚಿಗೆ ಹೆಚ್ಚಾಗಿರುವ ಸೌಂದರ್ಯ ರಹಿತವಾದ, ಬೋಳು ಬೋಳಾಗಿ ಕಾಣುವ ಕಟ್ಟಡಗಳಂತಲ್ಲ. ಅವುಗಳನ್ನು ಕಟ್ಟಿದ ಕಾಲದಲ್ಲಿ, ಉಪಯೋಗದ ಜೊತೆಗೆ, ಅವುಗಳ ಸೌಂದರ್ಯ, ನೋಡಿ ದವರ ಮನಸ್ಸಿನ ಮೇಲೆ ಅವು ಉಂಟುಮಾಡುವ ಪರಿಣಾಮ, ಇವುಗಳಿಗೂ ಮಾನ್ಯತೆಯಿತ್ತು.

ಒಂದೊಂದು ಸಾರಿ ಪಾಠ ಮನಸ್ಸಿಗೆ ನೀರಸವಾದಾಗ, (ಇದು ಅಪರೂಪ,) ಗೋಪುರದ ಮೇಲಿನ ಗಡಿಯಾರವನ್ನು ಕಾತರದಿಂದ ನೋಡು ತ್ತೇವೆ. ಕಿಟಕಿಯಾಚೆಯ ದೃಶ್ಯಗಳು ಯಾವಾಗಲೂ ಸೊಗಸಾಗಿಯೇ ಇರು ವುದಿಲ್ಲ. ಮಳೆಗಾಲದಲ್ಲಿ, ಆಕಾಶ ಮೋಡಗಳಿಂದ ತುಂಬಿ, ಸೂರ್ಯನು ಮರೆ ಯಾಗಿರುವಾಗ, ಜಡಿ ಮಳೆ ಬೀಳುತ್ತಿರುವಾಗ, ನಮ್ಮ ಮನಸ್ಸುಕೂಡ ಮೋಡ ಕವಿದಂತೆ ಇರುತ್ತದೆ. ಕಾಲಕಾಲಕ್ಕೆ ಬದಲಾಗುವ ಸೃಷ್ಟಿಯ ವೈಚಿತ್ರ್ಯವನ್ನು ಆ ಕಿಟಕಿಯ ಮೂಲಕ ನೋಡಿದ್ದೇವೆ.

ನಾವು ತರಗತಿಯನ್ನು ಬಿಟ್ಟು, ಆ ಮೈದಾನದಲ್ಲಿ ಹೋದರೆ, ಅದರ

ಸ್ವಾರಸ್ಯ ಅಷ್ಟಿರುವುದಿಲ್ಲ. ಆ ದೃಶ್ಯಗಳನ್ನು ಕ್ಲಾಸಿನ ಕಿಟಕಿಯ ಮೂಲಕ ನೋಡಿದಾಗಲೇ ಅವುಗಳ ಸ್ವಾರಸ್ಯ ಗೊತ್ತಾಗುವುದು. ಹೀಗೆ, ಜೀವನವನ್ನು ಕಿಟಕಿಯ ಮೂಲಕ ನೋಡುವುದೇ ನನಗೆ ಹೆಚ್ಚು ಪ್ರಿಯವಾಗಿದೆ. ಆ ದೃಶ್ಯಗಳನ್ನು ನೋಡುವುದರಲ್ಲಿ ತಲ್ಲೀನನಾಗಿದ್ದಾಗ, ಕ್ಲಾಸಿನಲ್ಲಿ ನಿಶ್ಶಬ್ದ ಆವರಿಸಿರುತ್ತದೆ. ಆದರೆ, ಉಪಾಧ್ಯಾಯರ ಭಾಷಣ ಮಾತ್ರ ಘಂಟಾನಾದದಂತೆ ಅವ್ಯಾಹತವಾಗಿ ಸಾಗಿರುತ್ತದೆ. ಕೆಲವು ಸಾರಿ, ಕಿಟಕಿಯ ಕೆಳಗೆ ಕೆಲಸಗಾರರು ಘಟ್ಟಿಯಾಗಿ ಮಾತಾಡುವ ಸದ್ದೋ, ಅಥವಾ ಯಾವನೋ ಕೆಲಸಗಾರ ಎತ್ತರದ ದನಿಯಲ್ಲಿ ಹೇಳಿಕೊಳ್ಳುವ ಹಾಡೋ ತರಗತಿಯ ಗಂಭೀರ ವಾತಾವರಣವನ್ನು ಸ್ವಲ್ಪ ಕಲಕುತ್ತದೆ.

ಕಾಲೇಜು ಜೀವನದ ಇತರ ಕೆಲವು ಅನುಭವಗಳನ್ನು ಮರೆತರೂ ಕ್ಲಾಸಿನ ಕಿಟಕಿಯಿಂದಾಚೆ ನೋಡುತ್ತಾ ಕಳೆದ ರಸನಿಮಿಷಗಳನ್ನು ಮಾತ್ರ ಮರೆಯುವಂತಿಲ್ಲ.

ಜಿ. ವಿ. ಸೂರ್ಯನಾರಾಯಣರಾವ್.

## ಶ್ರೀ ಡಿ. ವಿ. ಜಿ. ಅವರ 'ಸಾಹಿತ್ಯ ಶಕ್ತಿ'ಯಿಂದ

"Who sighs for beauty is a poet;
Who strives for it is a statesman."

ರಾಮಣೀಯಕವೆಂದು ಬಿಸುಸುಯ್ಯಲದು ಕವಿತೆ;
ಭೂಮಿಗದನೆಟುಕಿಸುವೆನೆಂಬೆಸಕ ರಾಜ್ಯಕತೆ;
ಆಮೂಲಮದರಿರವನರಸಲದು ವಿಜ್ಞಾನ;
ಸಾಮಗ್ರ್ಯದಿಂದದನು ಕಾಣೆ ದಿವ್ಯಜ್ಞಾನ.

ಕವಿಯುಂ ಸಹೃದಯನುಂ ಶಿವ ।
ಶಿವೆಯರ ಪೋಲ್ತೈಕ್ಯಮೊಂದೆ ದೈವಿಕಯೋಗಂ ॥
ಭುವನೈಕಭವ್ಯಮಾ ವಾ ।
ಕ್ಸವನಂ ಜಯಿಸುಗೆ ಸರಸ್ವತೀ ಪ್ರೀತಿಕರಂ ॥

# ನನ್ನ ಪುಸ್ತಕ ಸಂಗ್ರಹಣ

ಆಗ ನಾನು ಸುಮಾರು ಎಂಟು ವರ್ಷದ ಹುಡುಗ. ಮಿಡ್ಲ್ ಸ್ಕೂಲ್ ಮೊದಲನೆಯ ತರಗತಿಯಲ್ಲಿ ಓದುತ್ತಿದ್ದೆ. ನಮ್ಮ ಕ್ಲಾಸಿನವರೆಲ್ಲ ಸೇರುತ್ತಿದ್ದುದು ಸಣ್ಣ ಕೊಟಡಿಯಲ್ಲಿ. ಕಪ್ಪುಹಲಗೆ, ಸ್ಟೂಲು, ಮೇಜು, ಇವುಗಳ ಜೊತೆಗೆ ನಮ್ಮ ಕೊಠಡಿಯಲ್ಲಿ ಒಂದು ಪೆಟ್ಟಿಗೆ ಸಹ ಇತ್ತು. ಆ ಮರದ ಪೆಟ್ಟಿಗೆಯನ್ನು ನಮ್ಮ ಮೇಷ್ಟ್ರು ತಮ್ಮ ಸ್ಟೂಲಿನ ಪಕ್ಕದಲ್ಲಿ ಇಟ್ಟಿರುತ್ತಿದ್ದರು.

ನಾನೂ ನನ್ನ ಸಂಗಡಿಗರೂ ಕುಳಿತುಕೊಳ್ಳುತ್ತಿದ್ದುದು ನೆಲದ ಮೇಲೆ. ತರಗತಿಯಲ್ಲಿ ಕಾಲಿಟ್ಟ ದಿನವೇ ಹದಿನೈದರ ಮಗ್ಗಿಯನ್ನು ಚಾಚೂ ತಪ್ಪದೆ ಹೇಳಿದುದರ ಫಲವಾಗಿ ಎಲ್ಲರಿಗಿಂತ ಮುಂದೆ ಪೆಟ್ಟಿಗೆಯ ಹತ್ತಿರವೇ ಕುಳಿತುಕೊಳ್ಳುವ ಸುಯೋಗ ನನಗೆ ಲಭಿಸಿತು. ಪೆಟ್ಟಿಗೆಯಲ್ಲಿ ಏನಿರಬಹುದೆಂದು ನನ್ನ ಕ್ಲಾಸಿನ ಹಿರಿಯರನ್ನು—ಹಿಂದಿನ ವರ್ಷ ಡುಂಕಿಹೊಡೆದು ಅದೇ ತರಗತಿಯಲ್ಲಿ ಉಳಿದುಕೊಂಡಿದ್ದ ಮಹಾನುಭಾವರನ್ನು—ವಿಚಾರಿಸಿದೆ. ಯಾರಿಂದಲೂ ಸರಿಯಾದ ಉತ್ತರ ದೊರೆಯಲಿಲ್ಲ. ಕಾರಣ, ಹಿಂದಿನ ವರ್ಷ ಸ್ಕೂಲಿನಲ್ಲಿ ಅದರ ದರ್ಶನವಾಗುತ್ತಿದ್ದುದು ಅಪರೂಪವಂತೆ. "ಸಾರ್, ಆ ಪೆಟ್ಟಿಗೆಯಲ್ಲಿ ಏನಿದೆ ಸಾರ್?" ಅಂತ ನಮ್ಮ ಉಪಾಧ್ಯಾಯರನ್ನೇ ಕೇಳೋಣ ಅನ್ನಿಸಿತು. ಆದರೆ ಆ ಯೋಚನೆ ನನಗೆ ಹೊಳೆಯುತ್ತಿದ್ದಂತೆಯೇ ನನ್ನ ಎದೆ ನೂರಾರು ಬಾರಿ ಡವಡವನೆ ಹೊಡೆದುಕೊಳ್ಳಲಾರಂಭಿಸಿತು. ಪ್ರಶ್ನೆ ಕೇಳಿಸಿದ್ದು ನನ್ನ ಕಿವಿಗೆ ಮಾತ್ರವೆ.

ಮೂರು ನಾಲ್ಕು ತಿಂಗಳು ಕಳೆದ ಮೇಲೆ ಒಂದು ಶನಿವಾರದ ದಿನ ಹೆಡ್‌ಮಾಸ್ಟರ್ ಅವರಿಂದ ಮೆಮೊ ಬಂತು: ಅಂದು ನಮಗೆಲ್ಲ ಮನೆಗೆ ತೆಗೆದುಕೊಂಡುಹೋಗಿ ಓದಲು ಲೈಬ್ರರಿ ಪುಸ್ತಕಗಳನ್ನು ಕೊಡಬೇಕೆಂದು. 'ಲೈಬ್ರರಿ' ಎಂಬ ಶಬ್ದವನ್ನು ನಾನು ಕೇಳಿದ್ದು ಅದೆ ಮೊದಲು. ಮೆಮೊ ಪುಸ್ತಕ ತಂದಿದ್ದ ಜವಾನ ಹೊರಟುಹೋದ ಮೇಲೆ ನಮ್ಮ ಮೇಷ್ಟ್ರು ತಮ್ಮ ಕೋಟಿನ ಒಳಗಿನ ಜೇಬಿನಿಂದ ಬೀಗದ ಕೈಯನ್ನು ಹೊರಕ್ಕೆ ತೆಗೆದರು. ಸೀಮೆಸುಣ್ಣವನ್ನು ತೆಗೆಯುವ ಬದಲು—(ನಮ್ಮ ಮೇಷ್ಟ್ರು ಸೀಮೆಸುಣ್ಣವನ್ನು ಸಹ ಜೋಪಾನ

ವಾಗಿ ಜೇಬಿನಲ್ಲಿ ಇಡುವ ಸ್ವಭಾವದವರು)—ಸೀಮೆಸುಣ್ಣದ ಬದಲು—ಬೀಗದಕ್ಕೆ ಹೊರಕ್ಕೆ ತೆಗೆದರೇನೊ ಎಂದುಕೊಂಡು ನನ್ನ ಸಹಪಾಠಿಗಳಲ್ಲನೇಕರು ಗೊಳ್ಳೆಂದು ನಕ್ಕರು. ಪಾಪ! ಅವರಿಗೇನು ಗೊತ್ತು, ಮೇಷ್ಟರ ಕೋಟಿನ ಒಂದು ಜೇಬಿನೊಳಗೆ ಮತ್ತೊಂದು ಜೇಬಿತ್ತು ಎಂದು. ಕ್ಲಾಸಿನಲ್ಲಿ ಬುದ್ಧಿಶಾಲಿ ಎಂದು ಹೆಸರುವಾಸಿಯಾದ ನಾನು ಊಹಿಸಿದೆ—ಮೇಷ್ಟರ ಕೈಲಿದ್ದ ಬೀಗದಕ್ಕೆ ಲೈಬ್ರರಿ ಬಾಗಿಲು ತೆಗೆಯಬಲ್ಲ 'ಸೇಸಮ್ಮ'ನಿರಬೇಕೆಂದು.

ನನ್ನ ಊಹೆ ನಿಜವಾಯಿತು. ಗದ್ದಲ ಮಾಡುತ್ತಿದ್ದ ಹುಡುಗರನ್ನು ಬಯ್ಯುತ್ತ ಗೊಣಗುತ್ತ ಮೇಷ್ಟ್ರು ನನ್ನ ಮುಂದೆ ಇದ್ದ ಪೆಟ್ಟಿಗೆ ಬಾಗಿಲನ್ನು ತೆಗೆದರು. ಸುಮಾರು ನೂರಾರು ದಿನಗಳಿಂದ ನಾನೇ ಕಣ್ಣಾರೆ ನೋಡಲು ಹಾತೊರೆಯುತ್ತಿದ್ದ ಭಾಂಡಾರವು ಅಂದು ನನ್ನ ಕಣ್ಣಿಗೆ ಗೋಚರವಾಯಿತು. ಗೋಚರವಾದದ್ದು ಏನೂ ಸಿಂದಾಬಾದನ ಕಣ್ಣನ್ನು ಕೋರೈಸಿದ ರತ್ನದ ರಾಶಿಯಲ್ಲ. ನಮ್ಮ ಕ್ಲಾಸಿನ ಲೈಬ್ರರಿಯನ್ನು—ಪೆಟ್ಟಿಗೆಯಲ್ಲಿ ಗೆದ್ದಲುಹುಳುವಿಗೆ ಆಹಾರವಾಗಿ ಜಿರಳೆಗೆ ಉಪ್ಪಿನಕಾಯಾಗಿ ಇದ್ದ ನೂರೇ ಪುಸ್ತಕಗಳನ್ನು ನಾನು ಅಂದು ನೋಡಿದೆ.

ಸೊಂಟವನ್ನು ಗುದ್ದಿಕೊಳ್ಳುತ್ತ ಮೇಷ್ಟ್ರು ನೆಟ್ಟಗೆ ನಿಂತರು. ತಲೆಯ ಹಿಂಭಾಗದಲ್ಲಿದ್ದ ಕನ್ನಡಕವನ್ನು ಮೂಗಿನ ಮೇಲೆ ನಿಲ್ಲಿಸಿದ್ದ ದಾರದ ಗಂಟನ್ನು ಸರಿಪಡಿಸಿಕೊಂಡರು. ಹುಡುಗರ ಗದ್ದಲ ನಿಲ್ಲಲೇ ಇಲ್ಲ. ಹತ್ತಿರವೇ ಇದ್ದ ಕೋಲನ್ನೆತ್ತಿ ಮೇಜಿನ ಮೇಲೆ ಬಡಿದು ಅರಚಿದರು: 'ಸಾಯ್‌ಲೆನ್ಸ್! . . . ಸಾಯ್‌ಲೆನ್ಸ್! ಸುಮ್ನಿರಿ. ಕಥೆ ಪುಸ್ತಕ ಕೊಡ್ತೀನಿ. ಪೆಟ್ಟಿಗೇಲಿ ನೂರು ಪುಸ್ತಕ ಇದೆ. ಐವತ್ತು ಇಂಗ್ಲಿಷ್, ಐವತ್ತು ಕನ್ನಡ. ನಿಮಗೆ ಇಂಗ್ಲಿಷ್ ಪುಸ್ತಕ ಬೇಕೊ, ಕನ್ನಡ ಪುಸ್ತಕ ಬೇಕೊ, ಬೇಗ ಹೇಳಿ'. ಇಂಗ್ಲಿಷ್ ವರ್ಣಮಾಲೆಯನ್ನು ಸಹ ಸರಿಯಾಗಿ ತಿಳಿಯದ ಕನ್ನಡ ಪ್ರೇಮಿಗಳು ಒಂದೇ ಬಾರಿಗೆ ಕೂಗಿದರು: 'ನಮಗೆ ಕನ್ನಡ! ಕನ್ನಡ ಕಥೆ ಪುಸ್ತಕ ಬೇಕೊ, ಸಾರ್!'

ಪುಸ್ತಕಗಳನ್ನು ಹಂಚುವ ವೇಳೆಗೆ ಸುಮಾರು ಎರಡು ಗಂಟೆ ಕಳೆದವು. ಹುಡುಗರೆಲ್ಲ ತಮಗೆ ಬೇಕಾದ ಪುಸ್ತಕಗಳನ್ನು ಆರಿಸಿಕೊಂಡರು. ಆರಿಸಿಕೊಳ್ಳುವಾಗ ಪುಸ್ತಕಗಳ ಗಾತ್ರವನ್ನು ಗಮನಿಸಿದವರು ಹಲವರು, ಅವುಗಳ ಹೊರಗಣ ಸೌಂದರ್ಯವನ್ನು ಗಮನಿಸಿದವರು ಮತ್ತೆ ಹಲವರು. ಆದರೆ

ಅಂದವಾಗಿ ಮುದ್ರಿಸಲ್ಪಟ್ಟಿದ್ದ 'ಬೆಪ್ಪುತಕ್ಕಡಿ ಐವಾರ್' ತೆಗೆದುಕೊಳ್ಳಲು ಯಾರೂ ಇಷ್ಟಪಡಲಿಲ್ಲ. ತಾವು ಬೆಪ್ಪುತಕ್ಕಡಿಗಳಲ್ಲವೆಂಬ ಹೆಮ್ಮೆಯಿಂದ ಇರಬಹುದು. ಗೆದ್ದಲು ಹುಳುಗಳು ಕೂಡ ಆ ಪುಸ್ತಕವನ್ನು ಅಷ್ಟಾಗಿ ತಿಂದಿರಲಿಲ್ಲ; ಬೆಪ್ಪುತಕ್ಕಡಿಯೊಡನೆ ಹೆಣಗಾಡುವುದು ಬಲು ಕಷ್ಟ ಎಂದಿರಬಹುದು.

ಗಾಂಪರೊಡೆಯರ ಕಥೆಗಳನ್ನು ಕೇಳಿ ಹೊಟ್ಟೆ ಹುಣ್ಣಾಗುವಂತೆ ನಕ್ಕು ಆನಂದಪಟ್ಟಿದ್ದ ನಾನು 'ಬೆಪ್ಪುತಕ್ಕಡಿ ಐವಾರ್' ಮನೆಗೆ ತೆಗೆದುಕೊಂಡು ಹೋದೆ. ಕಥೆಯನ್ನು ಮತ್ತೆ ಮತ್ತೆ ಓದಿದೆ. ಪುಸ್ತಕ ತೆಗೆದುಕೊಂಡು ಹತ್ತು ಹನ್ನೆರಡು ದಿನಗಳಾದರೂ ಹಿಂದಕ್ಕೆ ಕೊಡುವ ಯೋಚನೆ ನನಗೆ ಬರಲಿಲ್ಲ. ಪುಸ್ತಕದ ಪ್ರತಿಯೊಂದನ್ನು ಕೊಂಡುಕೊಳ್ಳೋಣವೆಂದರೆ ಅದಕ್ಕೆ ಬೇಕಾದ ಹಣವಿಲ್ಲ. ಹಣ ಬೇಕೆಂದು ಹಿರಿಯರನ್ನು ಕೇಳಲು ಧೈರ್ಯವಿಲ್ಲ. ವರ್ಷದ ಮೊದಲಲ್ಲೇ ನಮ್ಮ ತಂದೆಯವರು ನನಗೆ ಹೇಳಿದ್ದರು, ಪಠ್ಯ ಪುಸ್ತಕಗಳನ್ನು ಬಿಟ್ಟು ಮತ್ತಿತರ ಯಾವ ಪುಸ್ತಕಗಳನ್ನೂ ನನಗೋಸ್ಕರ ಕೊಳ್ಳುವುದಿಲ್ಲವೆಂದು. ಲೈಬ್ರರಿ ಪುಸ್ತಕವನ್ನು ತೆಗೆದುಕೊಂಡನಂತರ ಹದಿನೈದು ದಿನಗಳೊಳಗಾಗಿ ಹಿಂತಿರುಗಿಸಿಕೊಡಬೇಕೆಂದೂ, ಹಾಗೆ ಕೊಡದೆ ತಡಮಾಡಿದರೆ ದಿನಕ್ಕೆ ಅರ್ಧಾಣೆ ದಂಡತೆರಬೇಕೆಂದೂ ಮೇಷ್ಟ್ರು ಪದೇ ಪದೇ ಹೇಳುತ್ತಿದ್ದರು. ದಂಡಕೊಡಲು ಮನೆಯಲ್ಲಿ ಹಣವನ್ನು ಕೇಳಿದರೆ ಒದೆ ತಪ್ಪದು. ಹೀಗೆ ಕಳವಳಪಡುತ್ತಿರಲು, ಪುಸ್ತಕವನ್ನು ವಾಪಸ್‌ಕೊಡಬೇಕಾದ ಶನಿವಾರದ ದಿನ ಬೆಳಗ್ಗೆ ದೇವರೇ ನನಗೆ ಕರುಣೆ ತೋರಿಸಿದ.

ಮನೆಯಲ್ಲಿ ತಿಂಡಿ ಏನೂ ಇಲ್ಲದೆ ಹೋದುದರಿಂದ, ಬೆಳಗ್ಗೆ ಸ್ಕೂಲಿಗೆ ಹೋಗುವ ಮಗನ ಹೊಟ್ಟೆ ಹಸಿಯದಿರಲಿ ಎಂದು ನಮ್ಮ ತಾಯಿ ನನಗೆ ಎರಡಾಣೆ ಕೊಟ್ಟು, 'ಅಂಗಡೀಲಿ ಏನಾದರೂ ಕೊಂಡು ತಿನ್ನೋ' ಎಂದು ಹೇಳಿದರು. ರಸ್ತೆಯಲ್ಲಿ ನಡೆದುಹೋಗುತ್ತಿದ್ದ ಹಾಗೆಲ್ಲ ಚೀಲದಲ್ಲಿದ್ದ 'ಬೆಪ್ಪುತಕ್ಕಡಿ ಐವಾರ್' ಯೋಚನೆಯೆ. ಕೆಲವು ನಿಮಿಷಗಳೊಳಗಾಗಿ ನಮ್ಮ ಸ್ಕೂಲಿನ ಹತ್ತಿರವೇ ಇದ್ದ ಮಿಠಾಯಿ ಅಂಗಡಿಯನ್ನು ಸೇರಿದೆ. ಅಂದು ಶನಿವಾರವಾದ್ದರಿಂದ ಅಂಗಡಿಯ ಮಾಲೀಕ ಬಾಗಿಲು ತೆಗೆದು ಕುಳಿತಿದ್ದ. ಒಂದಾಣೆ ಅವನ ಕೈಲಿಟ್ಟು, 'ಚೌಚೌ ಕೊಡಿ' ಎಂದು ಹೇಳಿದೆ. ಪೊಟ್ಟಣ ಕಟ್ಟಲು ಸೇಠ್‌ಜೀ ಅಲ್ಲಿದ್ದ ಹಳೆಯ ಹರಕಲು ಪುಸ್ತಕವೊಂದರಿಂದ ಹಾಳೆಯನ್ನು ಕಿತ್ತ. ಹರಿದ

ಹಾಳೆ ನನ್ನ ಕಣ್ಣುಗಳಿಗೆ ಒಂದು ಗಜದ ದೂರದಲ್ಲಿ ಸೇಠ್‌ಜೀ ಕೈಯಲ್ಲಿ ಇದ್ದರೂ ಅದು 'ಬೆಪ್ಪುತಕ್ಕಡಿ ಏರ್ವಾ' ಪುಸ್ತಕದ ಮೊದಲನೆಯ ಪುಟವೆಂದು ತತ್‌ಕ್ಷಣ ಗುರುತು ಹಿಡಿದೆ. ಕೂಡಲೆ ನನ್ನ ಗಂಟಲು ಕೂಗಿತು—"ರೀ, ಆ ಹಾಳೆ ಕಿತ್ರಲ್ಲ, ಆ ಪುಸ್ತಕ ನಿಮ್ಹತ್ರ ಇದೆಯೇನ್ರೀ? ಇದ್ರೆ ಸ್ವಲ್ಪ ನಂಗೆ ತೋರಿಸ್ರಿ."

"ಆ್ಞ . . . . . ಅದೆಲ್ಲ ಸಾಧ್ಯವಿಲ್ಲ. ಚೌ ಚೌ ಬೇಕಿದ್ರೆ ತಗೊ, ಬೇಡ್ದಿದ್ರೆ ಹೋಗು. ಬುಕ್ ಗಿಕ್ ತೋರಿಸೋಕಾಗಲ್ಲ. ನನ್ಹತ್ರ ಬಂದಿರೋದು ಚೌ ಚೌ ತಿನ್ನೋಕೋ, ಪೊಟ್ಟಣ ಕಟ್ಟೋ ಹಾಳೇನ ನೋಡೋಕೊ?'—ಎಂದು ಉತ್ತರವಿತ್ತ, ಯಾವಾಗಲೂ ಹುಬ್ಬು ಗಂಟಿಕ್ಕಿ ಹುಡುಗರೊಡನೆ ಮಾತನಾಡುವ ಸೇಠ್‌ಜೀ.

ನನ್ನ ಮುಖ ಕೆಂಪೇರಿತು. ನಡುಗುದನಿಯಿಂದ ಎಂದೆ—" ರೀ . . . . ರೀ . . . . ಆ ಬುಕ್‌ನ . . . . ದೂರದಿಂದ ತೋರಿಸ್ರೀ ಸಾಕು."

ವಿಚಿತ್ರ ಹುಡುಗನನ್ನು ಕಂಡು ವ್ಯಾಪಾರಿಗೂ ನಗು ಬಂತು, ದಯೆ ಬಂತು; ಪುಸ್ತಕ ತೋರಿಸಿದ. ನನ್ನ ಊಹೆ ನಿಜವಾಗಿತ್ತು: ಪುಸ್ತಕ 'ಬೆಪ್ಪು ತಕ್ಕಡಿ ಏರ್ವಾ.' ನನ್ನ ಮುಖ ಊರಗಲವಾಯಿತು. ಜೇಬಿನಲ್ಲಿದ್ದ ಒಂದಾಣೆ ಯನ್ನೂ ಸೇಠ್‌ಜೀ ಕೈಲಿಟ್ಟು ಹೇಳಿದೆ—'ರೀ, ಆ ಹಳೆ ಪುಸ್ತಕಾನೂ ನನಗೇ ಕೊಡ್ರಿ.'

"ಆಗೊಲ್ಲ. ಪೊಟ್ಣ ಕಟ್ಟೋಕೆ ಹಾಳೆ ಇಲ್ದ ಹಾಗಾಗುತ್ತೆ."

"ಬೇಕಿದ್ರೆ ನಾನು ಕೊಡ್ತೀನ್ರಿ ಹಾಳೇನ, ರಫ್‌ನೋಟ್ ಪುಸ್ತಕದಿಂದ ಹರಿದು"—ಎನ್ನುತ್ತಾ ಬರೆದು ಮುಗಿಸಿದ್ದ ಇಪ್ಪತ್ತು ಹಾಳೆಗಳನ್ನು ಹರಿದು ಕೊಟ್ಟೆ.

ಒಟ್ಟಿನಲ್ಲಿ ಬಹಳ ಸಂತೋಷದಿಂದ ಅಂಗಡಿಯನ್ನು ಬಿಟ್ಟು ಹೊರಡುವ ವೇಳೆಗೆ ನಾನು ಗಳಿಸಿದ್ದು—'ಬೆಪ್ಪುತಕ್ಕಡಿ ಏರ್ವಾ' ಹಾಳೆಗಳು ಮತ್ತು ಒಂದು ಪೊಟ್ಟಣ ಚೌಚೌ; ಕಳೆದುಕೊಂಡದ್ದು—ಎರಡಾಣೆ ಮತ್ತು ಇಪ್ಪತ್ತು 'ರಫ್' ಹಾಳೆ. ದಾರಿಯಲ್ಲಿ ಚೌ ಚೌ ಮುಗಿಸಿ, ಪೊಟ್ಟಣದ ಹಾಳೆಯನ್ನೂ ಸಂಗ್ರಹಿಸಿದ್ದ 'ಬೆಪ್ಪುತಕ್ಕಡಿ ಏರ್ವಾ' ಹಾಳೆಗಳೊಡನೆ ಸೇರಿಸಿದೆ. ಕ್ಲಾಸಿಗೆ ಹೋದುದೇ ತಡ, ಅದೆಂತಹುದೋ ಅರ್ಥವಿಲ್ಲದ ಗರ್ವದಿಂದ, ಲೈಬ್ರರಿ 'ಬೆಪ್ಪುತಕ್ಕಡಿ ಏರ್ವಾ' ಮೇಷ್ಟರಿಗೆ ಕೊಟ್ಟೆ. ಅಂದು ನಡೆದು ಪಾಠದಲ್ಲಿ

ನಾನು ತೋರಿಸಿದ ಶ್ರದ್ಧೆ ಅಷ್ಟಷ್ಟೆ. 'ಬೆಪ್ಪುತಕ್ಕಡಿ'ಗೆ ಎಂತಹ ರಟ್ಟು ಹಾಕಲಿ ಎಂಬುದೇ ನನ್ನ ಚಿಂತೆ. ದೇವರ ದಯೆಯಿಂದ ಪಾಠದ ವಿಷಯ ವಾಗಿ ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡದೆ ಏಟು ತಿನ್ನುವ ದುರದೃಷ್ಟ ನನ್ನದಾಗಲಿಲ್ಲ.

ಮನೆಗೆ ಹೋದವನೇ ಸಂಗ್ರಹಿಸಿದ್ದ ಹಾಳೆಗಳನ್ನು ಜೋಡಿಸಿ, ಅಂಟಿಸಿ, ರಟ್ಟು ಹಾಕಿ—ಒಟ್ಟಿನಲ್ಲಿ ಹಾಳೆಗಳಿಗೆ ಪುಸ್ತಕರೂಪವನ್ನು ಕೊಟ್ಟೆ. ಯಾರಿಗೂ ತಿಳಿಯದಂತೆ ಪುಸ್ತಕವನ್ನು ನನ್ನ ಪೆಟ್ಟಿಗೆಯ ಭಾರದ ಕೆಳಗೆ ಇಟ್ಟೆ. ಗಂಟೆ ಗೊಮ್ಮೆ ಅದರ ಸ್ಥಿತಿಯನ್ನು ಪರೀಕ್ಷಿಸಿ ಅದನ್ನು ಕಾಪಾಡಿದೆ. ಸಂಜೆಯ ವೇಳೆಗೆ ಗೋಂದಿನ ತೇವ ಆರಿತ್ತು. ನಮ್ಮ ತಂದೆಯವರಿಗೆ ಸಂಗ್ರಹಿಸಿದ ಪುಸ್ತಕವನ್ನು ಹೆಮ್ಮೆಯಿಂದ ತೋರಿಸಿ ಬಯ್ಯಿಸಿಕೊಂಡೆ. ಬೈಗುಳನ್ನು ಕೇಳಿಸಿ ಕೊಳ್ಳದೆ 'ಬೆಪ್ಪುತಕ್ಕಡಿ ಐರ್ವಾ' ಪೆಟ್ಟಿಗೆಯಲ್ಲಿ ಸೇರಿಸಿದೆ.

ನನ್ನ ಪುಸ್ತಕಸಂಗ್ರಹಣ (ಪಠ್ಯಪುಸ್ತಕಗಳನ್ನು ಬಿಟ್ಟು) ಪ್ರಾರಂಭ ವಾದದ್ದು ಶನಿವಾರದ—ಸ್ಥಿರವಾರದ—ದಿನ. ಅಂದಿನಿಂದಲೂ ನನ್ನ ಪುಸ್ತಕ ಸಂಗ್ರಹಕಾರ್ಯ ಸತತವಾಗಿ ನಡೆದುಬಂದಿದೆ. ಕನಿಷ್ಠ ಪಕ್ಷ ತಿಂಗಳಿಗೆ ಒಂದು ಪುಸ್ತಕವನ್ನಾದರೂ ಸಂಗ್ರಹಿಸಿದ್ದೇನೆ. ಇದುವರೆಗೆ ಗ್ರಂಥದ ಸಂಕಲನದಲ್ಲಿ ಕಳೆದಿರುವ ಹನ್ನೊಂದು ವರ್ಷಗಳಲ್ಲಿ ಸುಮಾರು ಐನೂರು ಪುಸ್ತಕಗಳನ್ನು ನನ್ನ ಭಂಡಾರಕ್ಕೆ ಸೇರಿಸಿದ್ದೇನೆ.

ಆದರೆ ಪುಸ್ತಕಗಳನ್ನು ಅಂದವಾಗಿ ಜೋಡಿಸಲು ನಮ್ಮ ಮನೆಯಲ್ಲಿ ಬೀರುಗಳಿಲ್ಲ. ಬೀರು ತಂದರೂ ಅದನ್ನು ಇಡಲು ಸ್ಥಳವಿಲ್ಲ. ಷೇಕ್ಸ್‌ಪಿಯರ್, ಮಿಲ್ಟನ್, ವರ್ಡ್ಸ್‌ವರ್ತ್, 'ಸ್ಪೆಕ್ಟೇಟರ್', ಜೈಮಿನಿ ಭಾರತ, ತುಲಸಿ ರಾಮಾ ಯಣ—ಇವೇ ಮೊದಲಾದ ಉದ್ಗ್ರಂಥಗಳನ್ನು ಜೋಪಾನವಾಗಿ ನವರಾತ್ರಿ ಗೊಂಬೆಗಳಿಟ್ಟಿರುವ ಬೀರುವಿನಲ್ಲಿ ಗೊಂಬೆಗಳ ಜೊತೆಯಲ್ಲಿ ಇಟ್ಟಿದ್ದೇನೆ. ಅನೇಕ ಇಂಗ್ಲಿಷ್, ಕನ್ನಡ, ಹಿಂದಿ ಕಾದಂಬರಿಗಳನ್ನು ಬೀರುವಿನ ಮೇಲೂ ನನ್ನ ಮೇಜಿನ ಮೇಲೂ ಹೇರಿದ್ದೇನೆ. ಕಿಟಕಿಗಳ ಕೆಳಭಾಗವನ್ನು ಮುಚ್ಚಿ ಮತ್ತೆ ಕೆಲವು ಪುಸ್ತಕಗಳಿಗೋಸ್ಕರ ಸ್ಥಳ ಮಾಡಿದ್ದೇನೆ.

ಸಂಗ್ರಹಿಸಿರುವ ಐನೂರು ಪುಸ್ತಕಗಳನ್ನೂ ಓದಿರುವೆನೆಂದು ಜಂಭ ಹೇಳಿ ಸುಳ್ಳುಗಾರನಾಗಬೇಕೆಂಬ ಆಸೆ ನನಗಿಲ್ಲ. ಇಷ್ಟು ಮಾತ್ರ ಧೈರ್ಯ

ವಾಗಿ ಎದೆ ಮುಟ್ಟಿ ಹೇಳಬಲ್ಲೆ ; ಸಂಗ್ರಹಿಸಿರುವ ಐನೂರು ಪುಸ್ತಕಗಳ ಪೈಕಿ ನಾಲ್ಕುನೂರಕ್ಕೆ ಮೆಲ್ಪಟ್ಟು ಪುಸ್ತಕಗಳನ್ನು ಓದಿದ್ದೇನೆ. ಕೆಲವು ಪುಸ್ತಕಗಳ ಮುನ್ನುಡಿಯನ್ನು ಮಾತ್ರ ಓದಿದ್ದೇನೆ. ಡಾ|| ರಾಧಾಕೃಷ್ಣ ಅವರ Indian Philosophyಯ ಮೊದಲ ಎರಡು ಅಧ್ಯಾಯಗಳನ್ನು ಓದಿ ಅರ್ಥವಾಗದೆ, ಇನ್ನೂ ಐದಾರು ವರ್ಷಗಳಾದ ಮೇಲೆ ಓದೋಣವೆಂದು ತೆಗೆದಿರಿಸಿದ್ದೇನೆ. Langland ಕವಿಯ Piers Plowman ಕೊಂಡು ತಂದು ಆರೇಳು ತಿಂಗಳಾದರೂ ಇನ್ನೂ ಓದಿಲ್ಲ. ಅದನ್ನು ಓದಲು ಅನೇಕ ಬಾರಿ ಪ್ರಯತ್ನಿಸಿ ವಿಫಲನಾಗಿದ್ದೇನೆ. ಕಾರಣ, Langland ಬರೆದಿರುವ ಪ್ರಾಚೀನ ಇಂಗ್ಲಿಷ್ ಭಾಷೆ ಮತ್ತು ಛಂದಸ್ಸು.

ಪುಸ್ತಕಗಳನ್ನು ಸಂಗ್ರಹಿಸಿದ ಭರದಲ್ಲೇ ಓದಿ ಮುಗಿಸುವ ಭರವಸೆ ನನಗಿಲ್ಲ. ಸಂಗ್ರಹಿಸಿದ ಅನೇಕ ಪುಸ್ತಕಗಳನ್ನು ಓದುವುದಕ್ಕೆ ಮೊದಲೇ ಕಳೆದುಕೊಂಡಿದ್ದೇನೆ. ಉದಾಹರಣೆಗೆ, ವಾಲ್ಟೇರನ Candide, ಪಂಡಿತ ಸುಧಾಕರರ ಸ್ವಾಮಿ ದಯಾನಂದರ ಚರಿತ್ರೆ, ಇತ್ಯಾದಿ. ಪುಸ್ತಕಗಳನ್ನು ಎರವಲಾಗಿ ತೆಗೆದುಕೊಂಡು ಹೋದ ಮಹಾಶಯರು ಅವುಗಳಲ್ಲಿ ಬರೆದಿರುವ ನಾಮಾಂಕಿತವನ್ನು ಮರೆತಹಾಗಿದೆ. ಪುಸ್ತಕ ತನ್ನ ನಿಜವಾದ ಮಾಲೀಕನನ್ನು ಮರೆತು ದತ್ತು ತಂದೆಯ ಹತ್ತಿರ ಸುಖವಾಗಿದೆ. ನನ್ನ ಹತ್ತಿರ ಇರಬೇಕಾದ ನನ್ನ ಪುಸ್ತಕ ಮತ್ತಾರ ಮನೆಯಲ್ಲೋ ಇದೆ. ನಾನು ಸಂಗ್ರಹಿಸಿದ ಪುಸ್ತಕಗಳನ್ನು ಅವರು ನನ್ನಿಂದ ಸಂಗ್ರಹಿಸಿದ್ದಾರೆ. ಅವರ ಪುಸ್ತಕ ಸಂಗ್ರಹ ನನ್ನ ಪುಸ್ತಕಸಂಗ್ರಹದ ಒಂದು 'ಬ್ರಾಂಚ್.' ಆದರೆ 'ಬ್ರಾಂಚ್' ಎಲ್ಲಿದೆ ಎಂಬುದು 'ಹೆಡ್ ಆಫಿಸ್'ಗೇ ಗೊತ್ತಿಲ್ಲ.

ಎರವಲಾಗಿ ತಂದುದನ್ನು ಎರವಲಾಗಿ ಕೊಟ್ಟವನೇ ಅದನ್ನು ಮರೆಯುವ ವರೆಗೂ ಕಾಲವಿಳಂಬ ಮಾಡಿ ಹಿಂತಿರುಗಿಸದೆ ಅದನ್ನು ಸ್ವಯಾರ್ಜಿತ ಸ್ವತ್ತಾಗಿ ಮಾಡಿಕೊಳ್ಳುವುದು ಪುಸ್ತಕಗಳನ್ನು ಸಂಗ್ರಹಿಸುವ ಒಂದು ವಿಧಾನ. ಅನೇಕರು ಗೌರವಸ್ಥ ಮಹನೀಯರು ಈ ವಿಧಾನವನ್ನು ಅವಲಂಬಿಸುವರು. ಆದರೆ ನಾನು ಮಾತ್ರ ಈ ಮಹನೀಯರನ್ನು ಅನುಸರಿಸಿಲ್ಲ. ಸ್ವಾಭಿಮಾನಿಯಾದ ನಾನು ಇತರರ ಪುಸ್ತಕಗಳನ್ನು ನನ್ನ ಪುಸ್ತಕಗಳೊಂದಿಗೆ ಎಂದಿಗೂ ಸೇರಿಸಲಾರೆ. ಎರವಲಾಗಿ ತಂದ ಪುಸ್ತಕಗಳನ್ನು ಆದಷ್ಟು ಬೇಗ ಓದಿ

ಮುಗಿಸಿ ಪುಸ್ತಕಗಳ ಮಾಲೀಕರಿಗೆ ವಾಪಸ್ ಕೊಡುತ್ತೇನೆ. ಅವು ಉತ್ತಮವಾದ ಪುಸ್ತಕಗಳಾದರೆ ಅವುಗಳನ್ನು ಕೊಂಡುಕೊಳ್ಳಲು ಯತ್ನಿಸುತ್ತೇನೆ.

ಸಾಧಾರಣವಾಗಿ ನಾನು ಕೊಳ್ಳುವುದು ಹಳೆಯ ಪುಸ್ತಕಗಳನ್ನೆ. ಮಿತವಾಗಿ ವೆಚ್ಚಮಾಡಿ ಹೆಚ್ಚು ಸಂಖ್ಯೆಯಲ್ಲಿ ಪುಸ್ತಕಗಳನ್ನು ಕೊಳ್ಳಬೇಕಾದರೆ ಹಳೆಯ ಪುಸ್ತಕಗಳನ್ನು ಮಾರುವವರ ಬಳಿಯೇ ಹೋಗಬೇಕು. ವಿರಳವಾದ ಪುರಾತನ ಶ್ರೇಷ್ಠ ಕೃತಿಗಳು ಸಿಕ್ಕುವುದು 'ಗುಜರಿ'ಯಲ್ಲೇ. Langland ಕವಿಯ Piers Plowman ಎಂಬ ಕೃತಿಯನ್ನು ನಾನು ಒಂದು ರೂಪಾಯಿಗೆ ಕೊಂಡುಕೊಂಡೆ. ಮಿಲ್ಟನ್ ಮಹಾಕವಿಯ ಗ್ರಂಥಕ್ಕೆ ನಾನು ಕೊಟ್ಟದ್ದು ಎಂಟೇ ಆಣೆ. ಕೀಟ್ಸ್ ಬರೆದ ಕವನಗಳೆಲ್ಲ ಮುದ್ರಿಸಲ್ಪಟ್ಟದ್ದ ಪುಸ್ತಕಕ್ಕೆ ನಾನು ಕೊಟ್ಟ ಬೆಲೆ ಒಂದೇ ಆಣೆ.

ಹಳೆಯ ಪುಸ್ತಕಗಳನ್ನು ಕೊಂಡು ಅನುಭವ ಇರುವವರಿಗೆ ನನ್ನ ಮಾತುಗಳ ತಥ್ಯಾಂಶದ ಅರಿವಾದೀತು. ಇತರರು ನನ್ನ ಮಾತುಗಳ ಸತ್ಯತೆಯ ಬಗ್ಗೆ ಅನುಮಾನಪಟ್ಟಾರು. ಅಂತಹವರಿಗೆ ನಾನು ಇನ್ನು ಇಪ್ಪತ್ತು ವರುಷಗಳೊಳಗಾಗಿ ಇಪ್ಪತ್ತು ಸಾವಿರ ಪುಸ್ತಕಗಳನ್ನು ಸಂಗ್ರಹಿಸಬೇಕೆಂದಿದ್ದೇನೆಂದು ಹೇಳಿದರೆ, ಅವರು ಸಂದೇಹವನ್ನು ವ್ಯಕ್ತಪಡಿಸಿಯಾರು, ನನ್ನ ವಾರ್ಷಿಕ ಆದಾಯವನ್ನು ತಿಳಿದುಕೊಂಡಾಗ. ಆದಾಯ ಎಷ್ಟಾದರೆ ಏನು? ಪುಸ್ತಕಗಳನ್ನು ಸಂಗ್ರಹಿಸಲು ಉತ್ಸಾಹ, ಅವುಗಳನ್ನು ಅಧ್ಯಯನ ಮಾಡಲು ಸರಸ್ವತಿಯ ಆಶೀರ್ವಾದ ಬಲ—ಇವೆರಡರ ಸಹಾಯವಿದ್ದರೆ ಸಾಕು, ಉದ್ದಾಮ ಪಂಡಿತನೆನಿಸಿಕೊಳ್ಳುವುದಕ್ಕೆ.

—ಕುಂಚಾಲ ಭುಜಂಗ ಸ್ವಾಮಿ.

## ಸುಭಾಷಿತ

ಓದಿನೊಳಲ್ಲದೆಯಿಹಪರ-
ಸಾಧನಸಂಪತ್ತಿಯಾಗದದುಕಾರಣದಿಂ |
ಸಾಧಿಸು ಸಕಲಶ್ರುತಮುಂ
ಭೇದಿಸಲಳವಪ್ಪುದಲ್ತೆ ಚೂಡಾರತ್ನಾ ||

# ಕಾಂಪೌಂಡ್ ಗೋಡೆ

ಬೆಳಕು ಹರಿಯಿತು. ನೇಸರು ಮೂಡಿದ. ನೇಸರಿನ ಎಳೆಗಿರಣ ಬಿದ್ದು ಹೊಂಬಣ್ಣಕ್ಕೆ ತಿರುಗಿದ ಮರಗಳ ಕೊರಳಿನಿಂದ ಹಕ್ಕಿಗಳ ಚಿಲಿಪಿಲಿ ಕೇಳಿಬರುತ್ತಿತ್ತು. ಕಾಂಪೌಂಡ್ ಗೋಡೆ ಎಂದಿನಂತೆ ಆ ದಿನವನ್ನೂ ಎದುರಿಸಲು ಸಿದ್ಧವಾಯಿತು.

ಹಕ್ಕಿಗಳ ಗುಂಪೊಂದು ಹಾರಿಬಂದು ಕಾಂಪೌಂಡ್ ಗೋಡೆಯ ಮೇಲೆ ಕುಳಿತುಕೊಂಡಿತು. ಒಂದು ಹಕ್ಕಿ ಹಾಡನ್ನೊರೆಯುತ್ತಿತ್ತು. ಉಳಿದುವೆಲ್ಲವೂ ಅದನ್ನು ಆಲಿಸಿ ಕೇಳುತ್ತಿದ್ದವು. ಯಾವ ಹಾಡನ್ನು ಒರೆಯುತ್ತಿದ್ದಿತೋ ಯಾರಿಗೆ ಗೊತ್ತು?

Will no one tell me what she sings?
Perhaps the plaintive numbers flow
For old, unhappy, far off things,
And battles long ago.

Or is it some more humble lay,
Familiar matter of to-day?
Some natural sorrow, loss or pain,
That has been, and may be again!

(Wordsworth:—Solitary reaper)

ಕಾಂಪೌಂಡ್ ಗೋಡೆಗೂ ತಿಳಿಯಲಿಲ್ಲ, ಆ ಹಾಡು ಯಾವ ತೆರನದು ಎಂದು. ಅಂತೂ ಮನಸ್ಸಿಗೆ ಆಹ್ಲಾದಕರವಾಗಿತ್ತು. ಪ್ರತಿದಿನವೂ ಕಾಂಪೌಂಡು ಗೋಡೆ ಈ ಹಾಡನ್ನು ಅನುಭವಿಸುತ್ತದೆ! ಆದರೆ ದಿನದ ಆರಂಭದಲ್ಲಿ ಮಾತ್ರ!

ಹಾಡು ಹೇಳಿದ ಹಕ್ಕಿಗಳ ಗುಂಪು ಹಾರಿಹೋಯಿತು. ಅಂತೆಯೇ ಕಾಂಪೌಂಡ್ ಗೋಡೆಯ ಆನಂದದ ಅಲೆಗಳೂ ಇಳಿಯತೊಡಗಿದುವು.

ದೂರದಲ್ಲಿ ಎಮ್ಮೆಗಳ ಗುಂಪೊಂದು ಬರುತ್ತಿತ್ತು. ಅವುಗಳ ಮುಂದ ಗಮನ ಗಂಭೀರವಾಗಿತ್ತು. ಕೊಟ್ಟಿಗೆಗಳಲ್ಲಿ ಕರು ಬಿಟ್ಟುಬಂದ ನೆನಪು ಬಂದಂತೆ ಹಿಂದೆ ಹಿಂದೆ ತಿರುಗಿ ತಿರುಗಿ ನೋಡುತ್ತ ಫುಟ್‌ಪಾತಿನ ಮೇಲೇ ನಡೆದು

ಬರುತ್ತಿದ್ದುವು. ಎಮ್ಮೆಗಳಾದರೂ ಸಾವಿರಾರು ಬೋರ್ಡುಗಳನ್ನು ನೋಡಿ ನೋಡಿ ಕಾಲುದಾರಿಯಲ್ಲಿ ನಡೆಯುವುದನ್ನು ಕಲಿತಿವೆಯಲ್ಲ!

ಎಮ್ಮೆಗಳು ಬಂದವು. ಕಾಂಪೌಂಡ್‌ಗೋಡೆಯ ಪಕ್ಕದಲ್ಲೆ ಅಚಲವಾಗಿ ನಿಂತವು. ಕಾಂಪೌಂಡ್ ಗೋಡೆಯನ್ನು ಒಂದು ಸಲ ದಿಟ್ಟಿಸಿ ನೋಡಿತು ಒಂದು ಎಮ್ಮೆ. ಪ್ರಾಯಶಃ ಕಾಂಪೌಂಡ್ ಗೋಡೆ "ಬಾ ತಬ್ಬಿಕೋ, ನೀನಾದರೂ ನನ್ನನ್ನು ದಿಟ್ಟಿಸಿನೋಡುವಿಯಲ್ಲ" ಎಂದು ಹೇಳಿರಬೇಕು. ಕೋಡನ್ನು ಮುಂದಕ್ಕೆ ಚಾಚಿದ ಎಮ್ಮೆ ಕಾಂಪೌಂಡ್ ಗೋಡೆಯನ್ನು ಒಂದು ಸಲ ತಿವಿಯಿತು. ತನ್ನ ನವೆಯನ್ನು ಪರಿಹಾರಮಾಡಿಕೊಂಡಿತು. ಗೋಡೆಯ ಆನಂದಬಾಷ್ಪವೋ ಎಂಬಂತೆ ನಾಲ್ಕು ಹುಡಿಮಣ್ಣು ಗೋಡೆಯ ಮೈಯಿಂದ ಕೆಳಕ್ಕೆ ಬಿತ್ತು. ಎಮ್ಮೆಗಳು ಮುಂದಕ್ಕೆ ಹೊರಟವು. ಗೋಡೆ ಹಾಗೇ ಹಿಂದೆಯೇ ನಿಂತಿತು.

ಆ ಕಡೆ ದೂರದಿಂದ ಸೈಕಲ್ಲು ತುಳಿಯುತ್ತಾ ಒಬ್ಬ ಬರುತ್ತಿದ್ದ. ರಭಸದಿಂದ ಬಂದು, ಗೋಡೆಯ ಹತ್ತಿರ ಇಳಿದು, ಸೈಕಲ್ಲನ್ನು ಗೋಡೆಯ ಕಡೆ ಎಸೆದು, ಪಾತ್ರೆಯೊಂದನ್ನು ಕೈಯಲ್ಲಿ ಹಿಡಿದು ಮನೆಯೊಳಗೆ ಹೊರಟ. ಸೈಕಲ್ಲಿನ ಆಘಾತಕ್ಕೆ ಕಾಂಪೌಂಡ್ ಗೋಡೆ ನಡುಗಿತು. ಸೈಕಲ್ಲನ್ನು ಬಿಟ್ಟುಕೊಂಡು ಆತ ಮತ್ತೆ ಹೊರಟುಹೋದ. ಆತ ಹಾಲುಮಾರುವವ.

ಮತ್ತೊಬ್ಬ ಹತ್ತಿರ ಬಂದ. ಸೂಟು, ಬೂಟು ಹಾಕಿಕೊಂಡಿದ್ದ ವ್ಯಕ್ತಿ. 'ಇಲ್ಲಿ 11 ನೇ ನಂಬರ್ ಬಸ್ ನಿಲ್ಲುತ್ತೇನ್ರಿ? ಎಂದು ಕೇಳಿಕೊಂಡು ಮತ್ತೊಬ್ಬ ವ್ಯಕ್ತಿ ಹತ್ತಿರಕ್ಕೆ ಬಂದ. ಅತ್ತ ಕಡೆಯಿಂದ ಹೆಂಗುಸೊಬ್ಬಳು ಬಂದಳು. ಎಲ್ಲರೂ ಕಾಂಪೌಂಡ್ ಗೋಡೆಯನ್ನೇ ಒರಗಿಕೊಂಡು ನಿಂತರು. ತಾಪೇದಾರಿ ಕೆಲಸದವ ಆಫೀಸಿನ ವಿಷಯವನ್ನು ಹೇಳತೊಡಗಿದ. ಹೆಂಗಸು ಮತ್ತೊಬ್ಬಳೊಡನೆ ಮನೆಯ ವಿಷಯ ಪ್ರಸ್ತಾಪಮಾಡತೊಡಗಿದಳು. ಎಲ್ಲ ವಿಷಯವನ್ನು ಮಾತನಾಡಿದರೂ ಬಸ್ಸು ಬರಲಿಲ್ಲ. "ಅಬ್ಬ! ಎಷ್ಟು ಹೊತ್ತಾದರೂ ಬಸ್ ಬರುವುದಿಲ್ಲ. ಕುಳಿತುಕೊಳ್ಳಲು ಕಲ್ಲು ಬೆಂಚುಗಳನ್ನೂ ಹಾಕಿಸಿಲ್ಲ" ಎಂದು ಅವರಲ್ಲೊಬ್ಬ ಒರಗಿಕೊಂಡಿದ್ದ ಕಾಂಪೌಂಡ್‌ಗೋಡೆಯನ್ನೇ ಮರೆತು ಹೇಳಿದ.

ಬಸ್ ಬಂತು. ಅವರು ಹೊರಟುಹೋದರು. ಕೆಲವು ಹುಡುಗರ ತಂಡವೊಂದು ಕುಣಿದಾಡುತ್ತಾ ಬಂದಿತು. ಸ್ಕೂಲಿಗೆ ಹೋಗುವವರವರು. ಎಲ್ಲರೂ

ಹತ್ತುವರ್ಷಕ್ಕಿಂತ ಕಡಮೆ ವಯಸ್ಸಿನವರು. ಒಬ್ಬನೆಂದ: "ಲ್ರೋ, ಇನ್ನೂ ಬಹಳ ಹೊತ್ತಿದೆ ಕ್ಲಾಸಿಗೆ ಹೋಗುವುದಕ್ಕೆ. ಏನು ಮಾಡೋದು? ಇಲ್ಲೇ ಕಾಂಪೌಂಡ್ ಗೋಡೆಯ ಮೇಲೆ ಕುಳಿತು ಹರಟೆ ಹೊಡೆಯೋಣ, ಬನ್ರೋ." ಸರಿ, ಸರ್ವಾನುಮತದಿಂದ ಗುಂಪು ಆ ಸೂಚನೆಯನ್ನು ಅಂಗೀಕರಿಸಿತು. ಎಲ್ಲರೂ ಕಾಂಪೌಂಡ್ ಗೋಡೆಯ ಮೇಲೆ ಕುಳಿತು ಲಲ್ಲೆಹೊಡೆಯಲಾರಂಭಿಸಿದರು. ಸುಮ್ಮನಿರುತ್ತದೆಯೇ ಹುಡುಗರ ಕೈ? ಒಬ್ಬ ಒಂದು ಚೂಪುಕಲ್ಲನ್ನು ತೆಗೆದುಕೊಂಡ. ತಾನು ಕುಳಿತ ಕಡೆಯೇ ತನ್ನ ಹೆಸರನ್ನು ಕೆತ್ತತೊಡಗಿದ. ಒಬ್ಬ ನಡೆಸಿದ ಎಂದರೆ ಎಲ್ಲರೂ ನಡೆಸುತ್ತಾರೆ. ಪ್ರತಿಯೊಬ್ಬರೂ ತಮ್ಮ ನಾಮಾಂಕಿತಗಳನ್ನು ಕೆತ್ತಲು ಪ್ರಾರಂಭಿಸಿದರು.

ಹುಡುಗರ ಕೂಗು ಜೋರಾಯಿತು. ಇವರ ಕೂಗು ಅತ್ತ ಹೋಗುತ್ತಿದ್ದ ಪೊಲೀಸಿನವನೊಬ್ಬನನ್ನು ಹತ್ತಿರಕ್ಕೆ ಕರೆಯಿತು. ಆತ ಬಂದ. "ಏಳ್ರೋ, ನಿಮ್ಗೇನೂ ಕೆಲಸವಿಲ್ಲವೇನ್ರೋ?" ಎಂದು ಗದರಿಸಿದ. ಹುಡುಗರು ಸದ್ದಿಲ್ಲದೆ ಎದ್ದುಹೋದರು. ಕಾಂಪೌಂಡ್ ಗೋಡೆ "ಇವರಿಗೆ ಯಾರಿಗೂ ನನ್ನ ನೆನಪೇ ಬರುವುದಿಲ್ಲವಲ್ಲ!" ಎಂದು ನೊಂದುಕೊಂಡಿತು.

ಬೆಳೆದ ತರುಣರ ತಂಡವೊಂದು ಬಂದಿತು. ಎಲ್ಲರೂ ಸೂಟುಧಾರಿಗಳು. ಸಿಗರೇಟು ಹಲವರ ಬಾಯಿನಲ್ಲಿ. ಅತ್ತಕಡೆಯಿಂದ ತರುಣಿಯರ ಗುಂಪೊಂದು ಬರುತ್ತಿದ್ದಿತು. "ಇಲ್ಲೇ ಒರಗಿಕೊಂಡು ನೋಡಿದರೆ ಚೆನ್ನು" ಎಂದುಕೊಂಡು ಗೋಡೆಯನ್ನು ಒರಗಿ ನಿಂತುಕೊಂಡರು. ತರುಣಿಯರ ಗುಂಪು ಹೊರಟು ಹೋಯಿತು. ತರುಣರೂ ಮುಂದಕ್ಕೆ ಹೊರಟರು. ಕಾಂಪೌಂಡ್ ಗೋಡೆ "ಇಂಥವುಗಳಿಗೂ ಆಸ್ಪದಕೊಟ್ಟೆನಲ್ಲ ನಾನು!" ಎಂದು ವ್ಯಥೆಪಟ್ಟುಕೊಂಡಿತು.

ಇದೇ ತೆರನಾಗಿ ಹತ್ತಾರು ಜನ ಹಾದುಹೋದರು. ಅದರ ಆಶ್ರಯ ಪಡೆದರು. ಯಾರಿಗೂ ಅದರ ನೆನಪು ಮಾತ್ರ ಬರಲಿಲ್ಲ.

ಮಧ್ಯಾಹ್ನದ ಉರಿಬಿಸಿಲು. ಕಾಲಿಲ್ಲದ ಭಿಕ್ಷುಕನೊಬ್ಬ ಬಂದು ಕಾಂಪೌಂಡ್ ಗೋಡೆಯ ಕೆಳಗಡೆ ಮಲಗಿದ. "ಅಪ್ಪಾ, ಕುಂಟನಪ್ಪಾ, ಕಾಸು ಕೊಡಿ!" ಎಂದು ಗೋಗರೆದು ಬೇಡಿಕೊಳ್ಳುತ್ತಿದ್ದ. ಹತ್ತಿರದಲ್ಲಿ ಬರುತ್ತಿದ್ದ ಉಲ್ಲನ್ ಸೂಟುಗಳೂ, ಸಿಲ್ಕ್ ಸೀರೆಗಳೂ ದೂರಸರಿದವು. ಯಾರೂ ಅವನನ್ನು ಗಮನಿಸದಂತೆ ಕಾಣಲಿಲ್ಲ, ಯಾರೂ ಅವನ ಮಾತನ್ನು ಕೇಳಿದಂತೆ ತೋರಲಿಲ್ಲ.

"ಅವನಿಗೆ ಮೈತುಂಬ ನೆಳಲುಕೊಡಲು ನಾನು ಇನ್ನೂ ಎತ್ತರವಾಗಿದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿದ್ದಿತು!" ಎಂದುಕೊಂಡಿತು ಕಾಂಪೌಂಡ್ ಗೋಡೆ.

ಭಿಕ್ಷುಕ ಏನೂ ದೊರಕಲಿಲ್ಲವೆಂದು ಅಲ್ಲಿಂದ ಎದ್ದುಹೋದ. ಮತ್ತೊಬ್ಬ ಒಣಕಲು ಮನುಷ್ಯ ಸೌತೇಕಾಯಿ ಚೂರುಗಳನ್ನು ಇಟ್ಟುಕೊಂಡು ಅಲ್ಲಿ ಮಾರಲು ಬಂದು ಕುಳಿತುಕೊಂಡ. "ಸೌತೇಕಾಯಿ ಚೂರು, ಮೂರೇ ಮೂರುಕಾಸು!" ಎಂದು ಎಷ್ಟು ಗಟ್ಟಿಯಾಗಿ ಕೂಗಿಕೊಂಡರೂ ಯಾರೂ ತೆಗೆದುಕೊಳ್ಳಲು ಬರಲಿಲ್ಲ. ಸೌತೇಕಾಯಿ ಚೂರುಗಳನ್ನು ಮಾರಿ ಬಂದುದರಲ್ಲಿ ಕೊಂಚ ತಿಂಡಿಗಾಗಬೇಕು, ಉಳಿದದ್ದು ನಾಳೆಯ ಸೌತೇಕಾಯಿಗಾಗಬೇಕು. ಸೌತೇಕಾಯಿಗಳನ್ನೆ ತಾನು ತಿನ್ನುವಷ್ಟು ಹಸಿವು. ತಿಂದುಬಿಟ್ಟರೆ ನಾಳೆಗೆ ಏನೂ ಇಲ್ಲ. ಈ ರೀತಿಯ ತೊಡಕಿನಲ್ಲಿ ಸಿಕ್ಕಿದ್ದ ಆತ ಹಾಗೆಯೇ ನಿದ್ದೆ ಹೋದ. ರಸ್ತೆಯ ಮರವೊಂದು ಅವನಿಗೆ ನೆರಳನ್ನು ಕೊಟ್ಟಿತು. ಕಾಂಪೌಂಡ್ ಗೋಡೆ ಆ ಮರವನ್ನು ಮನಸ್ಸಿನಲ್ಲೇ ಶ್ಲಾಘಿಸಿತು. ಕೊಂಚ ಹೊತ್ತಾಗಲು ಆ ಮರದ ಮೇಲಿಂದಲೇ ಕಪಿಯೊಂದು ಇಳಿದು ಬಂದು, ಸೌತೇಕಾಯಿಗಳನ್ನು ತಿನ್ನತೊಡಗಿತು. ಪಕ್ಕದಲ್ಲೇ ಹೋಗುತ್ತಿದ್ದ ವ್ಯಕ್ತಿಗೆ ಕಪಿಯನ್ನು ಓಡಿಸ ಬೇಕೆಂಬ ಅರಿವಾಗಲಿಲ್ಲ. ಸೌತೇಕಾಯಿಗಳನ್ನು ತಿಂದು ಅದೇ ಮರವನ್ನೇ ಪುನಃ ಹತ್ತಿತು ಆ ಕಪಿ. ಕಾಂಪೌಂಡ್ ಗೋಡೆ, "ನನ್ನಷ್ಟೇ ಕೈಲಾಗದ್ದು ಆ ಮರ!" ಎಂದುಕೊಂಡು ವ್ಯಥೆಪಟ್ಟಿತು.

ಉರಿಯುತ್ತಿದ್ದ ನೇಸರು ತಂಪಾಗುತ್ತಬಂದ. ಗೋಡೆಯ ಹತ್ತಿರ ಯಾರಾದರೂ ಬರುವರು, ಒರಗಿಕೊಳ್ಳುವರು; ಕುಳಿತುಕೊಳ್ಳುವರು. ಮತ್ತೊಬ್ಬ ಬಂದ, ಗೋಡೆಯ ಹಿಂಬದಿಯಲ್ಲಿ 'ಒಂದ' ಮಾಡಿ ಹೋದ.

ರಾತ್ರಿಯಾಯಿತು. ಯಾವನೋ ಒಬ್ಬ ಹುಡುಗ ಸಿನಿಮಾಚೀಟಿಗಳನ್ನು ತಂದ. ಎಲ್ಲಕ್ಕೂ ಗೋಂದುಹಾಕಿ ಕಾಂಪೌಂಡ್ ಗೋಡೆಯ ಮೇಲೆ ಅಂಟಿಸಿದ. ಮತ್ತೊಬ್ಬ ಹುಡುಗ ಬಂದ, "ಗೋವಧೆಯನ್ನು ನಿಲ್ಲಿಸಿ" ಎಂದು ಬರೆದ. ಗೋಡೆ ಇದರಲ್ಲಿ ಯಾವುದನ್ನು ಮೆಚ್ಚಬೇಕು, ಯಾವುದಕ್ಕೆ ಅಳಬೇಕು?

ಜನಸಂಚಾರ ಕಡಮೆಯಾಗುತ್ತ ಬಂದಿತು. ಕಾಂಪೌಂಡ್ ಗೋಡೆಯ ಒಂದು ದಿನದ ಬದುಕು ಮುಗಿಯಿತು.

—ಜಿ. ಎಸ್. ಶ್ರೀನಿವಾಸಮೂರ್ತಿ.

# ಸ್ನೇಹದ ಸವಿ

ಸವಿ! ಸವಿ! ಕಲ್ಲುಸಕ್ಕರೆಯ ಸವಿಯ ಪರಿಚಯ ಯಾರಿಗಿಲ್ಲ? ಪುರಂದರ ದಾಸರು ಹೇಳಿದಂತೆ "ಕಲ್ಲುಸಕ್ಕರೆಯ ಸವಿ ಬಲ್ಲವರೆ ಬಲ್ಲವರು." ಹೌದು, ಸ್ನೆಹವೂ ಸಹ ಕಲ್ಲುಸಕ್ಕರೆಯಂತೆಯೇ ಮಧುರವಾದದ್ದು. ಆದರೆ ಸಕ್ಕರೆಯಂತಲ್ಲದೆ, ಸ್ನೇಹ ಅಮೂಲ್ಯವಾದದ್ದು. ಸ್ನೇಹಕ್ಕೊಂದು ಬೆಲೆಯನ್ನು ಕಟ್ಟುವುದು, ದಿಕ್ಕುಗಳ ಗೋಚರವೇ ತೋರದ ವಿಸ್ತೀರ್ಣ ವೈಶಾಲ್ಯಗಳನ್ನುಳ್ಳ ಜಲರಾಶಿಯ ಅಂಚಿನಲ್ಲಿ ನಿಂತುಕೊಂಡು ಅದರ ನೀರಿನ ತುಂತುರು ಹನಿಗಳನ್ನು ಎಣಿಸುವಷ್ಟು ಮೌಢ್ಯದ ಕೆಲಸ. ಸ್ನೇಹದ ಬೆಲೆ ಅಪ್ರಮೇಯವಾದದ್ದು.

ಹನಿ ಹನಿ ಕೂಡಿದರೆ ಹಳ್ಳ, ಅದರಿಂದ ಸಾಗರ. ಹಾಗೆಯೇ ಮನಸ್ಸು ಮನಸ್ಸು ಮಿಳಿತವಾದರೆ ಸ್ನೇಹ, ಅದರಿಂದ ಸ್ನೇಹಸಾಗರ. ಅದರ ಉಬ್ಬರವನ್ನು ಸುಲಭವಾಗಿ ತಡೆಯಲಾಗುವುದಿಲ್ಲ. ಹೃದಯದಿಂದ ಹೃದಯಕ್ಕೆ, ಬಾಳಿನಿಂದ ಬಾಳಿಗೆ, ನಾಡಿನಿಂದ ನಾಡಿಗೆ, ರಾಷ್ಟ್ರದಿಂದ ರಾಷ್ಟ್ರಕ್ಕೆ ಸ್ನೇಹದ ತೆರೆಯುಕ್ಕಿ ಮುಂದೋಡತೊಡಗುವುದು. ಅದರ ದಿಗಂತವನ್ನು ಬಲ್ಲವರಾರೂ ಇಲ್ಲ, ಊಹಿಸುವುದೂ ಅಶಕ್ಯ. ಇಂತಹ ಸ್ನೇಹ ಮಹಾಸಾಗರದಲ್ಲಿ ಪ್ರತಿಯೊಬ್ಬ ಜೀವನೂ ಒಂದೊಂದು ಅಣು ಮಾತ್ರ, ಆನೆಯ ಗಾತ್ರದಲ್ಲಿ ಸಾಸಿವೆಯಷ್ಟು. ಆದರೆ ವಸ್ತುಗಳ ನಿರ್ಮಾಣದಲ್ಲಿ ಅಣುವೇ ಪ್ರಾಥಮಿಕ ಸಾಮಗ್ರಿ. ಅಣುವಿನೊಡನೆ ಅಣು ಕೂಡಿದರೆ ವಸ್ತು ಹೇಗೆಯೋ ಹಾಗೆಯೇ ಮಾನವರೆಲ್ಲರೂ ಪರಸ್ಪರ ಸಹಕರಿಸುತ್ತಾ ಒಗ್ಗೂರಲಿನ ಧ್ವನಿಯನ್ನು ಕೂಡಿಸಿದರೆ, ಅದರ ಚೇತನದಿಂದ ಜೀವನವು ವಿಕಾಸಗೊಂಡೀತು! ಬಾಳಿನ ಬೆಳಕಿನಿಂದ ಇಹವೇ ಸ್ವರ್ಗವೆನಿಸೀತು!

ಇಂದಿನ ಕನ್ನಡ ನುಡಿಯ ಕಾಂತಿ ಮಾಧುರ್ಯ ಓಜಸ್ಸುಗಳನ್ನು ಬೆಳೆಸುವ ನವಕವಿಗಳಲ್ಲಿ ಒಬ್ಬರಾದ ಶ್ರೀ ಗೋಪಾಲಕೃಷ್ಣ ಅಡಿಗರು ತಮ್ಮ 'ಭಾವತರಂಗ'ದಲ್ಲಿ ಬರೆದಿರುವ "ನಿನ್ನೊಳೊಂದೆ ಭಿಕ್ಷೆ ಗೆಳೆಯ, ಅದುವೆ ಹೃದಯ ದಾನವು! ಜನ್ಮ ಮೃತ್ಯುಗಳನು ನಗುವ ಪ್ರೇಮದಮೃತ ಪಾನವು! ದುಃಖ ಸುಖಗಳನ್ನು ಮಿಗುವ ತ್ಯಾಗದಮರ ಗಾನವು; ಹೊಂದುವಳಿಕೆ ತವದ ಸಖ್ಯ ಯೋಗದಭ್ರಯಾನವು!" ಎಂಬ ಪಂಕ್ತಿಗಳು ಅಕ್ಷರಶಃ ಸತ್ಯ.

ಸ್ನೇಹವು ಸಾಧಾರಣವಾಗಿ, ಸಮವಯಸ್ಸಿನವರಲ್ಲಿ, ಒಂದೇ ವಿಧವಾದ ತೊಂಪರೆಗೆ ಒಳಗಾಗಿರುವವರಲ್ಲಿ, ಭಾವನೆಗಳ ಏಕತೆಯಿರುವವರಲ್ಲಿ ಮಿಳನದಲ್ಲಿ ಒಂದೇ ಉದ್ದೇಶ ಧ್ಯೇಯಗಳಿರುವವರಲ್ಲಿ ಬೇಗನೆ ಬೆಳೆಯುತ್ತದೆ. ಪರಿಶುದ್ಧ ಸ್ನೇಹದ ಬಂಧನ ಬಹಳ ಗಾಢವಾದದ್ದು, ಆಚಂದ್ರಾರ್ಕವಾಗಿ ನಿಲ್ಲತಕ್ಕದ್ದು, ಅಜೇಯವಾದದ್ದು.

ಈ ಸ್ನೇಹಕ್ಕೆ ಉದಾಹರಣೆಗಳಾಗಿ ನಮ್ಮ ಇತಿಹಾಸಗಳಲ್ಲಿ ಎಷ್ಟೋ ಘಟನೆಗಳಿವೆ. ಕರ್ಣ ಸುಯೋಧನರ ಸ್ನೇಹ ಅತ್ಯಂತ ನಿಸ್ಪೃಹವಾದದ್ದು. ಒಬ್ಬರ ಸುಖಕ್ಕಾಗಿ ಮತ್ತೊಬ್ಬರು ತಮ್ಮ ಪ್ರಾಣವನ್ನರ್ಪಿಸಲೂ ಸಿದ್ಧರಾಗಿ ಇದ್ದರು. ಮಹಾಭಾರತ ಯುದ್ಧವೆಂಬ ಸಾಗರವನ್ನು ದಾಟುವುದಕ್ಕೆ ಸಮರ್ಥ ವಾದ ಅಂತಃಸತ್ತ್ವದಿಂದ ತುಂಬಿದ ಕರ್ಣಧಾರನು ಎನಿಸಿದ ರಾಧೇಯನ ಮತ್ತು ಪನ್ನಗಪತಾಕನಾದ ಸುಯೋಧನನ ಗೆಳೆತನ ಅನನ್ಯಸಾಧಾರಣ ವಾದದ್ದು, ಕಲುಷರಹಿತವಾದದ್ದು.

ಹಾಗೆಯೇ ಕೃಷ್ಣಾರ್ಜುನರ ಸ್ನೇಹವು ಕೂಡ ಲೋಕಪ್ರಸಿದ್ಧವಾಗಿದೆ. "ಮುರಾರಿಗೆ ಮೂರನೆಯ ದಾರಿ" ಎಂಬ ಬಿರುದನ್ನು ಸಂಪಾದಿಸಿಯಾದರೂ ಕೃಷ್ಣನು ಮಿತ್ರನ ಮಂಗಳಾಕಾಂಕ್ಷಿಯಾಗಿದ್ದನು. ತನ್ನ ಮಿತ್ರನಿಗಾಗಿ, ಆತನ ಸಹೋದರರಿಗಾಗಿ ತನ್ನ ಪ್ರತಿಜ್ಞೆಗೆ ಭಂಗವನ್ನು ತಂದುಕೊಂಡಾದರೂ, ಧರ್ಮದ ಮೂರ್ತಿಯೆನಿಸಿಕೊಂಡ ಕೃಷ್ಣನೂ ಅಧರ್ಮ(?)ವನ್ನೆಸಗುತ್ತಾನೆ.

ಚಕ್ರವನ್ನು ಕೈಯಲ್ಲಿ ಹಿಡಿಯುವುದಿಲ್ಲವೆಂದು ಪ್ರತಿಜ್ಞೆಮಾಡಿದಂತಹ ಮುರವೈರಿ ಕೂಡ ತನ್ನ ಸ್ನೇಹಿತನಿಗಾಗಿ, ಆತನ ಕಡೆಯವರಿಗಾಗಿ, ಚಕ್ರವನ್ನು ಕೈಯಲ್ಲಿ ಹಿಡಿದೇಬಿಟ್ಟನು. ಆದರೆ ಇವರಿಬ್ಬರಿಗೆ ಗೆಳೆತನದಲ್ಲಿ ನಂಟಸ್ತಿಕೆಯೂ ಸೇರಿದೆ. ಕೃಷ್ಣನು ತನ್ನ ಗೆಳೆಯನ ಮೇಲ್ಮೆಗಾಗಿ, ತನ್ನ ಸಹೋದರನಾದ ಬಲ ರಾಮನೊಡನೆ ಮನಸ್ತಾಪವನ್ನುಂಟುಮಾಡಿಕೊಳ್ಳುವುದಕ್ಕೂ ಹಿಂಜರಿಯಲಿಲ್ಲ.

ಸ್ನೇಹ ಅಮರವಾದದ್ದು, ಬಾಳಿನ ಕೊನೆಯುಸಿರಿನವರೆಗೂ ಸ್ಥಿರವಾಗಿ ನಿಲ್ಲುವಂತಹುದು ಎಂದೆವು. ಆದರೆ ದ್ರೋಣ ದ್ರುಪದರ ಸ್ನೇಹವನ್ನು ನೆನೆದರೆ ಗೆಳೆತನವು ಹೇಗೆ ಹಗೆತನವಾಗಿ ಪರಿಣಮಿಸುವುದೆಂಬುದನ್ನು ನೋಡಬಹುದು. ದ್ರುಪದನು ರಾಜ್ಯದೈಸಿರಿಯ ಮದದ ಅಮಲಿನಲ್ಲಿ ತನ್ನ ಬಾಲ್ಯದ ಸ್ನೇಹಿತ ನನ್ನು ತಿರಸ್ಕರಿಸಿಬಿಟ್ಟನು. ಆಡಿದ ಮಾತಿಗೂ ತಪ್ಪಿದನು. ಆದರೆ ದ್ರೋಣಾ

ಚಾರ್ಯರು ಆತನನ್ನು ಮನ್ನಿಸಿ, ತಮ್ಮ ಹಿರಿಮೆಯನ್ನು ಜಗಕ್ಕೆ ಸಾರಬಹು ದಾಗಿತ್ತು. ಆದರೆ ಅವರು ಆತನನ್ನು ಪರಿಭವಗೊಳಿಸಬೇಕೆಂಬ ಒಂದೇ ಛಲ ದಿಂದ ಕೌರವರಿಗೂ ಪಾಂಡವರಿಗೂ ಗುರುಗಳಾಗಿ, ಅವರಿಂದ ತಮ್ಮ ಸೇಡನ್ನು ತೀರಿಸಿಕೊಂಡರು. ಆದರೆ ಒಂದು ಸಾರಿ ಒಡೆದ ಕಂಚು ಮತ್ತೆ ಹೇಗೆ ಬೆಸೆಯಲಾರದೋ ಹಾಗೆಯೇ, ಮುನ್ನಿನ ಗೆಳೆತನ ಕೆಡದಿರಲಿ ಎಂದು ದ್ರೋಣ ರೇನೋ ದ್ರುಪದನನ್ನು ಪರಿಭವಗೊಳಿಸಿದ ಮೇಲೆ ಆತನಿಗೆ ಕ್ಷಮೆಯನ್ನು ತೋರಿದರೂ ಆ ಸ್ನೇಹದ ಮೊಳಕೆ ಮತ್ತೆ ಚಿಗುರಲಿಲ್ಲ. ಸ್ನೇಹ ಒಮ್ಮೊಮ್ಮೆ ಹೀಗಾಗುವುದೂ ಉಂಟು.

ಸ್ನೇಹವು ಸಾಮಾನ್ಯವಾಗಿ ಸಮಾನ ಅಂತಸ್ತಿನ, ಸಮಾನ ವಯಸ್ಸಿನ ಸಮಾನ ಗುಣದವರಲ್ಲಿ ಸ್ಥಿರವಾಗಿ ನಿಲ್ಲುತ್ತದೆ. ಆದರೆ ಕೆಲವು ವೇಳೆ ವಿಷಮ ಸ್ನೇಹದ ಬೀಜವು ಮೊಳೆತರೂ ಅದು ಮುಂದೆ ಬೆಳೆಯಲಾರದು. ಒಂದು ವೇಳೆ ಹಾಗೆ ಬೆಳದದ್ದೇ ಆದರೆ ಅದು ಇಡೀ ವಿಶ್ವಕ್ಕೇ ಒಂದು ಉತ್ತಮ ಮಾದರಿ ಯಾಗಿರುತ್ತದೆ. ಇಂತಹ ವಿಷಮ ಸ್ನೇಹಕ್ಕೆ ನಾವು ಕೃಷ್ಣ ಕುಚೇಲರ ಗೆಳೆತನ ವನ್ನು ನೆನೆಯಬಹುದು. ಕೃಷ್ಣನಾದರೋ ಯದುರಾಜ ಕುಮಾರ. ಕುಚೇಲನು ಒಬ್ಬ ಬಡ ಬ್ರಾಹ್ಮಣ. ಆದರೆ ಬಾಲ್ಯಕಾಲದಲ್ಲಿ ಇಬ್ಬರ ಗುರಿಯೂ ವಿದ್ಯಾರ್ಜನೆ ಯೊಂದೇ ಆಗಿತ್ತು. ಆದುದರಿಂದ ಅವರ ಸ್ನೇಹಲತೆಯು ಯಾವ ಅಡ್ಡಿ ಆತಂಕಗಳಿಲ್ಲದೆ ದಿನೇ ದಿನೇ ವರ್ಧಿಸತೊಡಗಿತು. ಆದರೆ ಯೌವನಸ್ಥರಾದ ಮೇಲೆ ಕೃಷ್ಣನು ದ್ವಾರಕಾನಗರಿಯ ಅರಸಾಗಿ, ಕುಚೇಲನೊಬ್ಬ ದಾರಿದ್ರ್ಯ ಸಾಮ್ರಾಜ್ಯದ ಗೃಹಸ್ಥನಾಗಿ ಉಳಿಯುತ್ತಾನೆ. ಆಗ ಬಾಲ್ಯಸ್ನೇಹದ ಸವಿ ನೆನಪು ಗಳನ್ನು ಮರೆಯಲಾಗದಿದ್ದರೂ, ಈಗ ಅದರಲ್ಲಿ ಸಂಕೋಚ ಸಂಶಯಗಳು ಬಂದು ನೆಲಸಿಬಿಡುತ್ತವೆ. ಆದರೆ ಕೃಷ್ಣನು ತನ್ನ ಬಾಲ್ಯದ ಗೆಳೆಯನನ್ನು ಮರೆಯುವುದಿಲ್ಲ. ಸ್ನೇಹದ ಅಮರತೆಯನ್ನು ಕಾಪಾಡುತ್ತಾನೆ. ತನ್ನ ಸಿರಿಯ ಅಟ್ಟಹಾಸವನ್ನು ತೋರ್ಪಡಿಸದೆ, ಆತನು ಪ್ರೀತಿಯಿಂದರ್ಪಿಸಿದ ಸ್ನೇಹದ ಕಾಣಿಕೆಯಾದ ಅವಲಕ್ಕಿಯನ್ನು ನಿಸ್ಸಂಕೋಚವಾಗಿ ಸ್ವೀಕರಿಸಿ, ಅದಕ್ಕೆ ಪ್ರತಿಯಾಗಿ ಆತನಿಗೆ ಸಕಲೈಶ್ವರ್ಯಗಳನ್ನು ಕರುಣಿಸುತ್ತಾನೆ. ಇದು ಉತ್ತಮ ಸ್ನೇಹಕ್ಕೊಂದು ಚಿರ ನೂತನವಾದ ಉದಾಹರಣೆ.

ಸ್ನೇಹದ ಹಿಂದೆ ತ್ಯಾಗದ ಭೂಮಿಕೆ ಇರಲೆಬೇಕಾಗುತ್ತದೆ. ತ್ಯಾಗವಿಲ್ಲದೆ

ಸ್ನೇಹದ ಪವಿತ್ರತೆ ಉಳಿಯಲಾರದು. ಆದರೆ ಎಲ್ಲರೂ ಇಂತಹ ಗೆಳೆಯರಾಗಲು ಸಾಧ್ಯವಿಲ್ಲ. ಕೆಲವರು ತಮ್ಮ ಮನಸ್ಸಿಗೆ ಒಪ್ಪಿಗೆಯಾದ ಗೆಳೆಯರನ್ನು ಮಾತ್ರ ಆರಿಸಿಕೊಳ್ಳುತ್ತಾರೆ. ಆದರೆ ಮೋಸ ವಂಚನೆ ಕುಹಕ ಕಾಪಟ್ಯಗಳಿಗೆ ತವರೂರಾದ ಇಂದಿನ ನವೀನ ಯುಗದಲ್ಲಿ ಪವಿತ್ರ ಗೆಳೆತನಕ್ಕೆ ಸ್ಥಾನವಿಲ್ಲವೋ ಎಂಬ ಶಂಕೆ ಬರದಿರುವುದಿಲ್ಲ. ಆದರೂ ಧರ್ಮವು ಇನ್ನೂ ಪೂರ್ತಿಯಾಗಿ ನಶಿಸಿಹೋಗದಿರುವುದರಿಂದ ಅಂತಹ ಅಮರಸ್ನೇಹದ ತಾರೆಗಳು, ಇಂದಿನ ಜನಜೀವನದಾಕಾಶದಲ್ಲಿಯೂ ಅಲ್ಲಲ್ಲಿ ಮಿಣುಗುಟ್ಟುತ್ತಿವೆ.

ಯಾವನ ಹೃದಯವು ಸ್ನೇಹಿತನ ವಿಷಯವಾದ ಮಾತುಗಳಿಂದ ಉಬ್ಬುವುದೋ, ಸ್ನೇಹಿತನ ದರ್ಶನಮಾತ್ರದಿಂದಲೇ ಸ್ವಾಭಾವಿಕವಾದ ಸಂತೋಷವು ಯಾವನಿಗೆ ಉಂಟಾಗುವುದೋ ಆತನೆ ನಿಜವಾದ ಗೆಳೆಯ. ಒಂದು ಬಾರಿ ಗೆಳೆತನದ ಸಂಕೋಲೆಗಳಿಂದ ಬಂದಿಸಲ್ಪಟ್ಟ ಮೇಲೆ ನಮ್ಮ ಮನಸ್ಸಿನ ಭಾವನೆಗಳೆಲ್ಲವೂ ನಮ್ಮ ಸ್ನೇಹಿತರ ಅಭ್ಯುದಯಾಕಾಂಕ್ಷೆಯಲ್ಲಿಯೇ ಕೇಂದ್ರೀಕೃತವಾಗಿರುತ್ತದೆ. ಅವರ ಗೆಲುವೇ ನಮ್ಮ ಗೆಲುವು, ಅವರ ಶೋಕವೇ ನಮ್ಮ ಶೋಕ, ಅವರ ಆನಂದವೇ ನಮ್ಮ ಆನಂದವಾಗಿ ಪರಿಣಮಿಸುತ್ತದೆ. ಆಗ ನಮ್ಮ ಅಸ್ತಿತ್ವದ ಅರಿವೇ ನಮಗಿರುವುದಿಲ್ಲ. ನಮ್ಮ ಇಡೀ ಜೀವಮಾನವನ್ನೇ ಸ್ನೇಹದ ಪಾದಗಳಲ್ಲಿ ಕಾಣಿಕೆಯನ್ನಾಗಿ ಅರ್ಪಿಸಬೇಕೆನಿಸುತ್ತದೆ. ನಮ್ಮ ಸುಖದುಃಖಗಳ ಗಣನೆಯೇ ಇರುವುದಿಲ್ಲ. ನಮ್ಮ ಜೀವನದ ಪ್ರತಿಯೊಂದು ಸಣ್ಣ ದೊಡ್ಡ, ಉಚ್ಚ ನೀಚ ಘಟನೆಗಳನ್ನು ಸ್ನೇಹಿತನಿಗೆ ವರದಿಯೊಪ್ಪಿಸಿದ ಹೊರತು ಮನಸ್ಸಿಗೆ ನೆಮ್ಮದಿಯಾಗುವುದಿಲ್ಲ. ನಿಜವಾಗಿ ಮನಸ್ಸು ಮನಸ್ಸು ಮಿಳಿತವಾದ ಸ್ನೇಹವು ತಾಯಿಯಾಗಲಿ ದೇವರಾಗಲಿ ಕೊಡುವ ಸುಖಕ್ಕಿಂತಲೂ ಪ್ರೀತಿಗಿಂತಲೂ ಮಿಗಿಲಾದ ಶಾಂತಿ ಸಮಾಧಾನಗಳನ್ನು ಕೊಡುತ್ತದೆ. ಅದರ ಸವಿಯನ್ನು ಹೇಳಲಶಕ್ಯ! ಅನುಭವಿಸಿರುವರೇ ಬಲ್ಲರು! ಆದರೆ ಇಂತಹ ಗೆಳೆತನದ ಅಭಿವೃದ್ಧಿಯನ್ನು ಲೋಕವು ಸಹಿಸುವುದಿಲ್ಲ. ಅದಕ್ಕೂ ಏನಾದರೊಂದು ಅಡ್ಡಿ ಅಂತಕಗಳನ್ನು ತಂದೊಡ್ಡುತ್ತದೆ.

ಆದರೆ ಕೆಲವು ವೇಳೆ "ಈ ಪ್ರಪಂಚದಲ್ಲಿ ಬರುವವರು ಬರುತ್ತಾರೆ, ಹೋಗುವವರು ಹೋಗುತ್ತಾರೆ. ನಮಗೆ ಬೇಕಾದವರು ಮಾತ್ರ ಇಲ್ಲ, ನಮಗೆ ಬೇಕಾದುದು ಮಾತ್ರ ಇಲ್ಲ. ಈ ಹುಚ್ಚು ಪ್ರಪಂಚದಲ್ಲಿ ಯಾವುದೂ ಸರಿ

ಯಿಲ್ಲ" ಎಂದು ಬಾಳಿನ ಕಹಿ ಅನುಭವಗಳನ್ನು ಅನುಭವಿಸಿ, ಬಾಳಿನಲ್ಲಿ ಬೇಗುದಿಗೊಂಡ ಕೆಲವರಿಗೆ ಇಂತಹ ವಿಶಾಲ ವಿಶ್ವದಲ್ಲಿ ಒಬ್ಬ ವ್ಯಕ್ತಿಯೂ ಗೆಳೆತನಕ್ಕೆ ಅರ್ಹನಾದವನು ತೋರುವುದಿಲ್ಲ. ಕೆಲವು ದಿನಗಳ ಹಿಂದೆ ಒಬ್ಬ ಹೆಸರಾಂತ ಚಲಚ್ಚಿತ್ರ ಪತ್ರಿಕೋದ್ಯಮಿಗೆ, ಒಬ್ಬ ವಾಚಕರು "ಅರ್ಧಶತಮಾನ ದಿಂದ ಅರಸುತ್ತಿದ್ದರೂ ಒಬ್ಬ ನಿಜವಾದ ಗೆಳೆಯ ದೊರೆಯಲಿಲ್ಲ, ಏಕೆ?" ಎಂದು ಪ್ರಶ್ನೆಯನ್ನು ಹಾಕಿದ್ದರು. ಆಗ ಅದಕ್ಕೆ ದೊರೆತ ಉತ್ತರವು ಆ ನಿರಾಶಾವಾದಿಯ ನಿರಾಶೆಯನ್ನು ವೃದ್ಧಿಪಡಿಸುವಂತೆಯೇ "ನಾನೂ ಸಹ ಅಂತಹ ಗೆಳೆಯನಿಗಾಗಿ ಅರಸಿ, ಅರಸಿ, ಕೊನೆಗೆ ನನ್ನ ನಾಯಿಯ ಮೇಲೆ ನನ್ನ ಗೆಳೆತನವನ್ನು ಕೇಂದ್ರೀಕರಿಸಿದ್ದೇನೆ" ಎಂಬ ಉತ್ತರವು ದೊರಕಿತು. ಕೆಲವು ವೇಳೆ ಇದು ನಿಜವೇ ಎನಿಸುತ್ತದೆ. ಆದರೆ ಇಂದಿನ ವಿಜ್ಞಾನ ಯುಗದಲ್ಲಿ ಕೃತಕ ಮಳೆಯನ್ನು ಬರಿಸಬಹುದಂತೆ! ಸ್ಥಿರವಾದ ಸ್ನೇಹವನ್ನು ಪಡೆಯುವುದು ಸಾಧ್ಯವಿಲ್ಲವೆ?

—ಎಸ್. ಅನ್ನಪೂರ್ಣ.

## ಸುಭಾಷಿತ

ಮಾತು ಬಲ್ಲವನಿಗೆ ಜಗಳವಿಲ್ಲ

—ಗಾದೆ

ವಚನದೊಳಿಹಪರಸುಖಮುಂ
ವಚನದೊಳಂ ದೈವಗತಿಯು ದುರ್ಗತಿಯಕ್ಕುಂ ।
ವಚನದೊಳರಿಮಿತ್ರತೆಯುಂ
ವಚನಾಮೃತದಿಂದೆ ತುಷ್ಟನೀಶ್ವರನರಿಯಾ ॥

ಮುಕುರಂ ಕೈಯೊಳಿರಲ್ಕೆ ನೀರ ನೆಳಲೇಕ್ಕೆ ತಾಂ ನೆಗಳಿರ್ದುಮೂ-
ಟಕೆ ಗೊಡ್ಡಾಕಳನಾಳ್ವರೇ ಗುಣಯುತರ್ ಪಾಲುಂಡು ಮೇಲುಂಬರೇ
ಶುಕನೋದಿಂಗುರೆ ಚೆಲ್ವೆ ಕಾಕರವ ರಂಭಾನೃತ್ಯಕಂ ಡೊಂಬರೇ
ಸಖರಿಂದುನ್ನತವಸ್ತುವೇ ಹರಹರಾ ಶ್ರೀ ಚೆನ್ನಸೋಮೇಶ್ವರಾ

*

# ಏರೋಪ್ಲೇನು ತಲೆಯ ಮೇಲೆ ಹಾರಿಹೋದಾಗ

'ಪ್ರಬಂಧ ಬರೆಯೋಣವೆಂದು ಕಾಗದ ಕಡ್ಡಿ ಹಿಡಿದು ಕುಳಿತರೆ ಕೈ ಮುಂದೆ ಸಾಗುವುದೇ ಇಲ್ಲವಲ್ಲ, ಏನು ಮಾಡೋಣ?' ಎಂದು ಯೋಚಿಸುತ್ತಾ ಅಲ್ಲಿಂದ ಇಲ್ಲಿಗೆ ಶತಪಥ ತಿರುಗಾಡಲು ಪ್ರಾರಂಭಿಸಿದೆ. ಮನಸ್ಸಿನಲ್ಲಿಯೇ ಧರ್ಮಸಂಕಟಕ್ಕೆ ಆರಂಭವಾಯಿತು: ಒಂದು ಕಡೆ, ಮನಸ್ಸಿಗೆ ಸರಿಯಾಗಿ ಬುದ್ಧಿ ಓಡಲೊಲ್ಲದು; ಇನ್ನೊಂದು ಕಡೆ, ಎಲ್ಲ ಬಿಟ್ಟು ಇಷ್ಟು ಸಣ್ಣ ವಿಷಯದ ಮೇಲೆ ಪ್ರಬಂಧ ಬರೆಯಬೇಕಲ್ಲ ಎಂಬ ಅಸಡ್ಡೆ. ಒಂದು ವೇಳೆ ಒಂದು ಕಾದಂಬರಿಯನ್ನಾದರೂ ಬರೆದುಕೊಡು ಎಂದರೆ ಬರೆದುಕೊಟ್ಟೇನು. ಆದರೆ ಕೆಲಸಕ್ಕೆ ಬಾರದ ಯಾವುದೋ ವಿಮಾನ ನಮ್ಮ ತಲೆಯ ಮೇಲೆ ಹಾರಿ ಹೋದಾಗ ಏನಾಗುತ್ತದೆ ಎಂಬುದನ್ನು ಕುರಿತು ಸ್ವಾರಸ್ಯವಾದ ಪ್ರಬಂಧ ಬರೆಯಬೇಕು ಎಂದರೆ ನನ್ನಂತಹ ವ್ಯೈಗಳ್ಳನಿಗೆ ಕಷ್ಟವೇ.

ಗಂಟೆಗಟ್ಟಲೆ ಯೋಚಿಸಿದೆ. ಆದರೂ ನನ್ನ ಮೊದ್ದು ಮಿದುಳು ಚಲಿಸುವುದೇ ಕಷ್ಟವಾಯಿತು. ಏಕೆಂದರೆ, ಇಷ್ಟು ಸಣ್ಣ ವಿಷಯದ ಮೇಲೆ ವಸ್ತು ಹೇಗೆ ಜೋಡಿಸಿ ಹೊಂದಿಸಿ ಬರೆಯುವುದು ಎಂಬುದೊಂದೇ ನನಗೆ ಬಂದಿದ್ದ ಚಿಂತೆ. ಏರೋಪ್ಲೇನು ನಮ್ಮ ತಲೆಯ ಮೇಲೆ ಹಾರಿಹೋದರೆ ಏನಾಗುತ್ತೆ? ಕಿವಿ ಕತ್ತರಿಸುವಂತೆ ಶಬ್ದವಾಗುತ್ತದೆ, ಎಂತಹ ಧೈರ್ಯಸ್ಥ ಆಳಿಗೂ ಕಾರಣವಿಲ್ಲದೆ ಎದೆ "ಡಗ್! ಡಗ್! ಡಗ್!" ಎನ್ನುತ್ತಿರುತ್ತದೆ. ಅದಕ್ಕೂ ನಮ್ಮ ತಲೆಗೂ ಅರ್ಥಾರ್ಥ ಸಂಬಂಧವಿರದಿದ್ದರೂ ನಮ್ಮ ಎದೆಯಲ್ಲಿ ಯಾವುದೋ ಒಂದು ಅಧೈರ್ಯದ ಕಿಡಿ ಧೈರ್ಯದ ಬತ್ತಿಯನ್ನು ಒತ್ತುತ್ತಿರುತ್ತದೆ. ತಲೆಯಿಂದ ಹಿಡಿದು ಉಂಗುಷ್ಟದವರೆಗೂ ಬೆವರಿ, ಆ ಬೆವರುನೀರು ಹನಿಗಟ್ಟಿ ಮೈಮೇಲೆ ಹರಡಿರುತ್ತದೆ. ಒಟ್ಟಿನಲ್ಲಿ ಆ ಯಂತ್ರದಿಂದ ನಮಗೆ ಕಿಂಚಿತ್ತು ಆಪತ್ತು ಇಲ್ಲದಿದ್ದರೂ ಹೆದರಿಕೆ ತಪ್ಪಿದ್ದಲ್ಲ. ಇಷ್ಟು ವಿಷಯ ಮಾತ್ರ ನನ್ನ ತಲೆಗೆ ಮೊದಲು ಹೊಳೆಯಿತು.

ಅಷ್ಟರಲ್ಲಿ ನನ್ನ ಅದೃಷ್ಟಕ್ಕೆ ಸರಿಯಾಗಿ ನಮ್ಮ ಚಿಕ್ಕಪ್ಪ ಪೈಲಟ್ ಟ್ರೈನಿಂಗ್‌ಗೆ ಹೋಗಿದ್ದವನು ರಜ ತೆಗೆದುಕೊಂಡು ನಮ್ಮೂರಿಗೆ ಬಂದಿದ್ದ.

ಅವನಿಂದ ಏನಾದರೂ ನನ್ನ ಪ್ರಬಂಧಕ್ಕೆ ಸಾಮಗ್ರಿ ದೊರಕಿದರೂ ದೊರಕೀತೆಂದು ಅವನನ್ನು ಕಾಣಲು ಹೋದೆ. ಅವನಿಗೆ ಈ ಪ್ರಶ್ನೆ ಹಾಕಲು, ಅವನು "your ear-drums will burst" ಎಂದ. ಅಷ್ಟು ಗ್ರಾಸ ನನ್ನ ಪ್ರಬಂಧಕ್ಕೆ ಸಾಕೆ? ಹೋದ ದಾರಿಗೆ ಸುಂಕವಿಲ್ಲವೆಂದು ಮನೆಗೆ ಹಿಂತಿರುಗಿದೆ. ಈ ಪ್ರಬಂಧ ಬರೆಯಲು ನನಗೆ ಯೋಗ್ಯತೆ ಇಲ್ಲವೆಂದು ಸುಮ್ಮನಾದೆ.

ಒಂದು ದಿವಸ ಬೇಸಿಗೆಯ ಉರಿಬಿಸಿಲು, ನಮ್ಮ ಜಮೀನನ್ನು ನೋಡಿಕೊಂಡು ಬರೋಣವೆಂದು ಹೊಸಹಳ್ಳಿಗೆ ಹೊರಟೆ. ಊರನ್ನು ತಲಪುವ ಹೊತ್ತಿಗೆ ಸೂರ್ಯ ನಡುನೆತ್ತಿಗೆ ಬಂದಿದ್ದ. ಹೊಲದಲ್ಲಿ ನಮ್ಮ ಆಳು ನಿಂಗ ಒಬ್ಬನೇ ಕೆಲಸ ಮಾಡುತ್ತಿದ್ದ. ಅವನನ್ನು ಕಂಡು ಒಂದೆರಡು ಮಾತುಗಳಾದ ಮೇಲೆ ವಿಶ್ರಮಿಸಲು ಗುಡಿಸಿಲಿಗೆ ಹೋದೆವು. ಲೋಕರೂಢಿಯಾಗಿ ಇಬ್ಬರೂ ಹರಟೆಹೊಡೆಯುತ್ತ ಕುಳಿತೆವು. ಮಧ್ಯಾಹ್ನದ ವಾತಾವರಣ ಪ್ರಶಾಂತವಾಗಿತ್ತು. ಆಗಾಗ್ಗೆ ಪಕ್ಕದ ಮೈದಾನದಲ್ಲಿ ಆನಂದದಿಂದ ಮೇಯುತ್ತಿದ್ದ ಕುರಿಗಳ ಕೊರಳಿನ ಗಂಟೆಯ ಟಣಟಣ ಸದ್ದು ಬಿಟ್ಟು ಬೇರೊಂದು ಗದ್ದಲವಿಲ್ಲ.

ಈ ಸಮಯಕ್ಕೆ ಸರಿಯಾಗಿ ಅಂತರಿಕ್ಷದಲ್ಲಿ ಏನೋ ಭಯಂಕರ ಧ್ವನಿಯಾಯಿತು. ಅದು ಕಂಚಿನ ಕಂಬಕ್ಕೆ ಕಲ್ಲು ಬೀರಿ, ಜೊತೆಯಲ್ಲಿ ತಬಲ ಹೊಡೆದರೆ ಬರುವ ಧ್ವನಿಯಂತಿತ್ತು. ಅದೂ ಕೂಡ ಒಂದೇ ಸಮನೆ ಕೇಳಿಸುತ್ತಿರಲಿಲ್ಲ. ಈಗ ಕೇಳಿಸಿ ಮತ್ತೆ ಅದೇ ಪ್ರಶಾಂತ ವಾತಾವರಣದ ನಿರ್ಮಲವಾದ ಗಾಳಿ ಬೀಸುತ್ತಿತ್ತು. ಆ ಧ್ವನಿ ಎಂತಹವರನ್ನೂ ಗುಡುಗಿಸಿ ನಡುಗಿಸುವಂತಿತ್ತು. ದೇವೇಂದ್ರನಿಗೂ ವಾಯುದೇವನಿಗೂ ಯುದ್ಧವಾಗುತ್ತಾ ಭೂಲೋಕವನ್ನೇ ಗುಡುಗುಟ್ಟಿಸುತ್ತಿದ್ದಾರೋ ಎಂಬಂತೆ ಇತ್ತು ಆ ಧ್ವನಿ.

ನಮ್ಮ ನಿಂಗನಿಗೆ ಈ ವಿಜ್ಞಾನಯುಗದ ಯಂತ್ರಗಳಲ್ಲಿ ಕೊಂಚವೂ ನಂಬಿಕೆ ಇಲ್ಲ. ನಮ್ಮ ಹೊಸ ಹಳ್ಳಿ ಜನ್ಮತಾಳಿದಾರಭ್ಯ ನಾಗರಿಕತೆಯ ಧಾಳಿಯ ಧೂಳನ್ನು ಕೂಡ ಕಂಡಿದ್ದಿಲ್ಲ. ಅಂತಹದರಲ್ಲಿ ನಮ್ಮ ನಿಂಗ ಇನ್ನು ವಿಮಾನವನ್ನು ಹೇಗೆ ತಾನೆ ಕಂಡಾನು? ಅದರಲ್ಲೂ ಅವನಿಗೆ ಈ ಹಳ್ಳಿಯ ದೇವರುಗಳಲ್ಲಿ ಮಹಾಭಕ್ತಿ, ಮಹಾ ನಂಬಿಕೆ. ಒಂದು ವೇಳೆ ಎರಡು ದಿವಸ ಊಟವನ್ನಾದರೂ ಬಿಟ್ಟಾನು; ಆದರೆ ಗ್ರಾಮದೇವತೆಗೆ ಅವನು ಶರಣುಹೊಡೆಯದೆ ಇರುವ ದಿನವೇ ಇಲ್ಲ.

ನಮ್ಮ ಮಾತು ಸಾಗುತ್ತಿತ್ತು. ನಾನು ಕಿಂಚಿತ್ತೂ ಹೆದರಿಕೆಯನ್ನಾಗಲಿ ಮುಖದಲ್ಲಿ ಕಳವಳವನ್ನಾಗಲಿ ತೋರ್ಪಡಿಸಲಿಲ್ಲ. ಏಕೆಂದರೆ ಏರೋಪ್ಲೇನು ಎಂದರೆ ನಮಗೆ, ಅದರಲ್ಲೂ ಪಟ್ಟಣವಾಸಿಗಳಿಗೆ, ಸರ್ವೇಸಾಧಾರಣ. ಅದೇ ಹಳ್ಳಿಯವರಿಗೆ ಈ ಆಧುನಿಕ ಪುಷ್ಪಕ ವಿಮಾನವನ್ನು ಕಂಡರೆ ಅತ್ಯಾಶ್ಚರ್ಯ, ಮತ್ತು ಅತ್ಯಾದರ. ಅದನ್ನು ನೋಡಲು ಮನೆ ಮನೆಗಳ ಮುಂದೆ ಗುಂಪು ಸೇರಿರುತ್ತಾರೆ. ಇನ್ನು ಕೆಲವರು ಚಾವಡಿ ಅಟ್ಟದ ಮೇಲೆ, ಬಿಸಿಲು ಮಾಳಿಗೆ ಮೇಲೆ ಹತ್ತಿನಿಂತು ಅದನ್ನೇ ದೃಷ್ಟಿಸಿ ನೋಡುತ್ತಿರುತ್ತಾರೆ. ಹೊಲದಲ್ಲಿ ರಾಗಿ ಚೆಲ್ಲುತ್ತಿದ್ದ ರೈತರು ನಿಂತಲ್ಲಿಯೇ ನಿಂತು ಆಶ್ಚರ್ಯದಿಂದ ಗಗನದ ಕಡೆ ವಿಮಾನ ಕಣ್ಮರೆಯಾಗುವವರೆಗೆ ನೋಡುತ್ತಿರುತ್ತಾರೆ. ಆದರೆ ನಮ್ಮ ಜೋಡೀ ಗ್ರಾಮದಲ್ಲಿ, ಇಂದಿನವರೆಗೂ ಯಾವ ಕುಳವೂ ವಿಮಾನವೆಂಬುದನ್ನು ಕಂಡೂ ಇಲ್ಲ, ಕೇಳಿಯೂ ಇಲ್ಲ. ಅವರುಂಟು, ಅವರ ಗ್ರಾಮ ಉಂಟು; ಹೊಲದಲ್ಲಿ ಆರಂಭಮಾಡುವುದು, ಬೆಳೆದದ್ದನ್ನು ಧಣಿಗಳಿಗೆ ಒಪ್ಪಿಸಿ ಅವರ ಭತ್ಯದಿಂದ ಜೀವಿಸುವುದು;—ಈ ರೀತಿ ಅವರ ಜೀವನ. ಇರಲಿ.

ವಿಮಾನವು ಭೋರ್ಗರೆಯುತ್ತ, ವೇಗದಿಂದ ವೇಗಕ್ಕೆ ಹಕ್ಕಿಯಂತೆ ಹಾರುತ್ತಾ ನಮ್ಮ ಹೊಲದ ಹತ್ತಿರಕ್ಕೆ ಬಂದಿತು. ಬರುತ್ತ ಬರುತ್ತಾ ಅದರ ಶಬ್ದ ಜೋರಾಯಿತು. ಅದು ಕೇಳಿ, ನನ್ನ ಪಕ್ಕದಲ್ಲಿ ಕುಳಿತಿದ್ದ ನಿಂಗನಿಗೆ ಜೀವ ತಲ್ಲಣಿಸಿತು. ಅವನ ಜೀವಮಾನದಲ್ಲಿಯೇ ಅವನು ಅಂಥ ಶಬ್ದ ಕೇಳಿರಲಿಲ್ಲ. ಅವನು ಹೆದರಿದವನಂತೆ ನನ್ನ ಮುಖನೋಡಿ "ಕಲಿಯುಗ ಮುಣುಗೋಕಾಲ ಬಂದೈತೆ ಸ್ವಾಮಿ. ಅದಕ್ಕೇ ದ್ಯಾವರು ಈಸು ಸಬ್ದ ಮಾಡ್ತಾವನೆ. ಅಯ್ಯೋ ನನ್ನ ಎಂಡರು ಮಕ್ಕಳ ಗತಿ ಏನಪ್ಪ? ನಮ್ಮಪ್ಪ ತಿರುಪತಿ ತಿಮ್ಮಪ್ಪ, ನನ್ನ ವ್ಯಾಕೆ, ರಾಸು ಎಂಗಾದರೂ ಉಳಿಸಪ್ಪ!" ಎಂದು ಕೂಗುತ್ತಾ ನೆಲದ ಮೇಲೆ ಅಡ್ಡಬಿದ್ದೇ ಬಿಟ್ಟ. ನಿಜಕ್ಕೂ ಎಂಥ ದೆವ್ವದಂತಹ ಯಂತ್ರ! ದೆವ್ವದಂತಹ ಅದರ ಕೂಗಿಗೆ ಅವನ ಜೀವ ತಲ್ಲಣಿಸಿತ್ತು, ಮುಖವೆಲ್ಲಾ ಕೆಂಪಡರಿತ್ತು. ತಲೆಯ ಕೂದಲು ನೆಟ್ಟಗೆ ನಿಮಿರಿ ನಿಂತಿದ್ದಿತು. ಕರಿಯ ಮುಖಕ್ಕೆ ತಿಲಕ ಪ್ರಾಯವಾಗಿದ್ದ ಅವನ ಕಣ್ಣುಗಳು ಭಯದಿಂದ ಆ ಕಡೆಗೂ ಈ ಕಡೆಗೂ ಚಲಿಸುತ್ತಿದ್ದುವು. ಎದೆಯಲ್ಲಿನ ಡಗ್‌ಡಗ್ ಶಬ್ದ ಕೋಣೆಯಲ್ಲೆಲ್ಲಾ ಪಸರಿಸಿತ್ತು. ಕಾಲುಗಳಂತೂ ಪಾರ್ಶ್ವವಾಯು ಸೆಳೆದವರಿಗೆ ಆಗುವಂತೆ ಗಡ

ಗಡನೆ ಅದಿರುತ್ತಿತ್ತು. ಬರುತ್ತಬರುತ್ತಾ ಏರೋಪ್ಲೇನ್ ನಮ್ಮ ನೆತ್ತಿಯ ಮೇಲೇ ಬಂತು. ಅದು ನಮ್ಮ ಗುಡಿಸಿಲಿನ ಮೇಲೆ ಹಾರಿದಂತೆಯೇ ಭಾಸವಾಯಿತು. ಶಬ್ದವಂತೂ ಹೃದಯವಿದ್ರಾವಕವಾಗಿತ್ತು. ಆ ಘೋರ ಶಬ್ದದ ಮುಂದೆ ನಿಂಗನ ಕೂಗು ವೃಥಾ ಆಯಿತು. ಆ ಕಠೋರ ಶಬ್ದದಿಂದ ನಿಜಕ್ಕೂ ನನ್ನ ಎದೆಯಲ್ಲಿಯೂ ಹೃದಯದ ಬಡಿತ ನಡೆಯದೇ ಇರಲಿಲ್ಲ. ಅದಕ್ಕಿಂತ ಹೆಚ್ಚಾಗಿ ನಿಂಗನ ಕೂಗು, ಅವನ ವರ್ತನೆ ನನಗೆ ಇನ್ನೂ ಭಯವನ್ನು ತಂದೊಡ್ಡಿತು.

ಅವನನ್ನು ಸಂತೈಸಲು, "ಅಯ್ಯೋ ನಿಂಗ! ಅದು ವಿಮಾನ ಕಣೋ. ಹೆದರಬೇಡವೋ" ಎಂದೆ. ಅದಕ್ಕವನು ಇನ್ನೂ ಹೆದರಿದವನಂತೆ "ಔದು ಸ್ವಾಮಿ, ಕಲಿಯುಗ ಮುಣುಗೋ ಕಾಲಕ್ಕೆ ಶ್ರೀರಾಮ ಪುಷ್ಪಕ ಇಮಾನದಾಗ ಬರ್‍ತಾನಂತೆ. ಆಮೇಲೆ ಅವನೇ ಅಂತೆ ನಾಸವಾಡೋದು ಸಾಮಿ. ಇನ್ನು ನಮ್ಮ ಗತಿ ಮುಗಿದಂಗೇ ಸಾಮಿ. ಅಯ್ಯೋ, ಪ್ರಪಂಚ ಎಲ್ಲಾ ಮುಣುಗುತ್ತದೆ ಸಾಮಿ, ಎಲ್ಲಾ ಬೂದಿ ಆಗಿಹೋಯ್ತುದಂತೆ ಸಾಮಿ, ಈ ಸರ್ತಿ ನಮ್ಮ ಗ್ರಾಮ ದೇವತೆಗೆ ಕೋಣ ಬಲಿಕೊಡಲಿಲ್ಲ, ಅದಕೆ ಇಂಗಾತ್ತೈತೆ. ಅಯ್ಯೋ ಸಿವ, ನನ್ನ ಕಾಪಾಡಪ್ಪ! ನನ್ನ ಮಗನ್ನ ಉಳಿಸಪ್ಪ!" ಎಂದು ಅಂಗಲಾಚಲು ಮೊದಲು ಮಾಡಿದ.

ಆ ಸಮಯಕ್ಕೆ ಸರಿಯಾಗಿ ವಿಮಾನವು ನಮ್ಮ ನೆತ್ತಿಯ ಮೇಲೆ ಹರಿದು ಹೋದಂತೆ ಆಯಿತು. ಗುಡಿಸಿಲು ಕೂಡ ಕಿತ್ತು ಬಂದು, ವಿಮಾನದ ಗಾಲಿಗಳು ನನ್ನ ತಲೆಯ ಕ್ರಾಪಿನ ಮೇಲೆ ಹರಿದುಹೋದಂತೆ ನನಗೂ ಭಾಸ ವಾಯಿತು. ಅದರ ಕೂಗನ್ನಂತೂ ವರ್ಣಿಸಲು ಅಸಾಧ್ಯ. ಅದೊಂದು ಗಳಿಗೆ ಮಾತ್ರ ಎಲ್ಲರಿಗೂ ಹಾಗೆ. ಆಮೇಲೆ ಎಲ್ಲರೂ ಪ್ರತಾಪಶೂರರೆ. ಈ ಶಬ್ದವನ್ನು ತಡೆಯಲಾರದೆ ನಿಂಗನು ಹೆದರಿ, ಅದು ನಮ್ಮ ನೆತ್ತಿಯ ಮೇಲೆ ಹಾರಿಹೋದ ಸಮಯಕ್ಕೆ ಸರಿಯಾಗಿ "ಕಾಪಾಡು ಈಸ್ವರ! ಕಾಪಾಡು ಈಸ್ವರ! (ಅವಸರದಲ್ಲಿ 'ಕಾಪಾಡಪ್ಪ' ಎನ್ನುವುದರ ಬದಲು) ಕಾಡು ಪಾಪ ಈಸ್ವರ!" ಎಂದು ಹೇಳುತ್ತಾ ಕಿಟ್ಟನೆ ಕಿರಚಿ ನೆಲದ ಮೇಲೆ ಬಿದ್ದುಬಿಟ್ಟ. ನನಗೆ ಒಂದೂ ತೋಚದಂತೆ ಆಯಿತು. ಮೇಲೆ ನೋಡಲು ಭಯ, ಈಚೆ ಓಡಿಬಂದರೆ Aeroplane ಎಲ್ಲಿ ದಾರಿ ತಪ್ಪಿ ನಮ್ಮ ಮೇಲೆ ಬಿದ್ದುಬಿಡು

ತ್ತದೆಯೋ ಎಂದು ಭಯ. ಒಟ್ಟಿನಲ್ಲಿ ಎರಡು ಗಳಿಗೆ ಕಣ್ಣುಮುಚ್ಚಿ ಕುಳಿತು ಬಿಟ್ಟೆ. ಎದೆಯಿಂದ "ಡಗ್! ಡಗ್! ಡಗ್!" ಎಂಬುವ ಶಬ್ದ ನನ್ನ ಕಿವಿಯನ್ನು ಭೇದಿಸುತ್ತಿತ್ತು. ಕಾರಣ ದೇವರಿಗೇ ಗೊತ್ತು. ಹಗಲಾದರೆ ರಾತ್ರಿಯಾದರೆ ವಿಮಾನವನ್ನು ನೋಡುವ ನನಗೆ ಈ ರೀತಿ ಏಕೆ ಆಯಿತು ಎಂಬುದು ಆಶ್ಚರ್ಯವಾಗಿ ಕಂಡುಬಂತು. ಅದು ಹೇಗಾದರೂ ಇರಲಿ; ಕೆಲವೇ ನಿಮಿಷಗಳಲ್ಲಿ ಇಷ್ಟೊಂದು ಘಟನೆಗೆ ಕಾರಣವಾದ ಆ ನೀಚ ಪೈಶಾಚಿಕ ವಿಮಾನ ತನ್ನ ದಾರಿ ತಾನು ಹಿಡಿದು ಹೋಯಿತು.

ಅದು ಹೋದ ಎರಡು ನಿಮಿಷದ ಮೇಲೆ ನನಗೆ ಬುದ್ಧಿ ಸ್ತಿಮಿತಕ್ಕೆ ಬಂತು. ಪಕ್ಕದ ತೋಟದ ಭಾವಿಯಿಂದ ನೀರು ತಂದು ಎರಡು ಮೂರು ಕೊಡ ಸುರಿದ ಮೇಲೆ ಸಿಂಗನಿಗೆ ಜ್ಞಾನ ಬಂತು. ಆಮೇಲೆ ಅವನಿಗೆ ಸವಿಸ್ತಾರವಾಗಿ ವಿಮಾನದ ಚರಿತ್ರೆ ಹೇಳಿದೆ. ಅವನು ನಂಬಲಿಲ್ಲ. ಗ್ರಾಮ ದೇವತೆಗೆ ತತ್‌ಕ್ಷಣ ಹೋಗಿ ಅಡ್ಡ ನಮಸ್ಕಾರ ಹಾಕಿ ಬಂದ.

ಅಲ್ಲಿಂದ ಇಬ್ಬರೂ ಗ್ರಾಮಕ್ಕೆ ಬಂದೆವು. ಎಲ್ಲರ ಮನೆಯ ಬಾಗಿಲಿಗೂ ಅಗಳಿ ಸಿಕ್ಕಿಸಿದೆ. ಗ್ರಾಮವೆಲ್ಲಾ ನಿಶ್ಶಬ್ದವಾಗಿದೆ. ಕೊನೆಗೆ ಏನೂ ತೋಚದೆ ಶ್ಯಾನುಭೋಗನ ಮನೆಗೆ ನುಗ್ಗಿದೆವು. ಅವನು ನಮ್ಮ ಸಿಂಗನಿಗಿಂತ ಸಾಹಸಿ. ಈ ಶಬ್ದಕ್ಕೆ ಹೆದರಿ ರಾಗಿಯ ಹಗೇವಿನೊಳಗೆ ಮುಚ್ಚಿಟ್ಟುಕೊಂಡಿದ್ದ, ಭೂಪ! ಮೇಲೆ ಯಾರೋ ಕಲ್ಲೆಳೆದು ಹೋಗಿದ್ದರು. ನಾವು ಹೋಗುವ ಸಮಯಕ್ಕೆ ಪಾತಾಳದಿಂದ ಯಾವುದೋ ಆರ್ತನಾದ ಬರುತ್ತಿತ್ತು. ಅದು ನಮ್ಮ ಶ್ಯಾನುಭೋಗನ ಚೀತ್ಕಾರ. ಕೊನೆಗೆ ಹಗೇವಿನ ಕಲ್ಲೆಳೆದು, ಆತನ ಸ್ಥೂಲ ಶರೀರವನ್ನು ಹನ್ನೆರಡು ಜನ ಭಾರಿ ಆಳುಗಳು ಎತ್ತಿ ಮೇಲೆ ಕರೆದುಕೊಂಡು ಬಂದರು. ಹಗೇವಿನ ಇಂಗಾಲದೊಡನೆ ಆತನ ಭಯದ ನೀರು ಬೆರೆತು, ಬೆವರು ಧಾರಾಕಾರವಾಗಿ ಶ್ಯಾನುಭೋಗನ ಮುಖದಲ್ಲಿ ಹುಟ್ಟಿ, ಆತನ ಬನೀನುಗಳಲ್ಲಿ ಪ್ರವಹಿಸಿ, ಗಲ್ಲಿ ಕೊಲ್ಲಿಗಳನ್ನು ದಾಟಿ ಕೊನೆಗೆ ಕಾಲಿನ ತುದಿಯಲ್ಲಿ ಹರಿಯುತ್ತಿತ್ತು. ಅಯ್ಯೋ ಬಡಪ್ರಾಣಿಯೇ ಎಂದುಕೊಂಡು, ನಮ್ಮ ಅಳಲೇಕಾಯಿ ಪಂಡಿತರಿಂದ ಔಷಧಿ ಮಾಡಿಸಿ, ಯಂತ್ರ ಕಟ್ಟಿಸಿ, ದೇವರ ಮುಂದೆ ಈಡುಗಾಯಿ ಒಡಸಿದ ಮೇಲೆ ನಮ್ಮ ಶ್ಯಾನುಭೋಗನೂ ಒಂದು ಗಂಡು ಎನ್ನಿಸಿದ. ಅಡಕೆ ತೋಟದಲ್ಲಿ ಕೆಲಸಮಾಡುತ್ತಿದ್ದ ನಮ್ಮ ಹೈಕಳು

ಕೂಡ ಈ ವಿಮಾನವೆನಿಸಿದ ಬಕಪಕ್ಷಿಯನ್ನು ಕಂಡು ಪ್ರಜ್ಞೆತಪ್ಪಿ ಕೆಳಗೆ ಬಿದ್ದಿದ್ದರು.

ಒಟ್ಟಿನಲ್ಲಿ ಹೊಸಹಳ್ಳಿಯನ್ನು ಪೂರ್ವಸ್ಥಿತಿಗೆ ತರಬೇಕಾದರೆ ಮೂರು ದಿವಸ ಹಿಡಿಯಿತು. "ಏರೋಪ್ಲೇನಿನಿಂದ ಹೊಸಹಳ್ಳಿಯಲ್ಲಿ ನಡೆದ ಅಪಘಾತ" ಎಂದು ನಮ್ಮ ಹಳ್ಳಿಯ ಪ್ರಮುಖರು ಪತ್ರಿಕಾ ಸಂಪಾದಕರಿಗೆ ಏಕೆ ಸುದ್ದಿ ಮುಟ್ಟಿಸಲಿಲ್ಲವೋ ಆ ಶಿವನೇ ಬಲ್ಲ. ಏನೋ ಆ ದೇವರ ದಯೆಯಿಂದ ಅಂದು ನನ್ನ ಸ್ಥಿತಿ ಅಷ್ಟು ಚಿಂತಾಜನಕವಾಗಿರಲಿಲ್ಲ. ಆದರೂ ನಾನು ಕೂಡ ಅಂದು ನಡೆದ ಘಟನೆ ತೀರಿದ ಮೇಲೆ ನನ್ನ ಬಟ್ಟೆ ಹಿಂಡಿ ನೋಡಿದ್ದಲ್ಲಿ ಸರಿಯಾಗಿ ಅರ್ಧ ಬಕೆಟ್ ಬೆವರುನೀರು ಇತ್ತು!

ಈ ವೈಜ್ಞಾನಿಕ ಯುಗದಲ್ಲಿ ವಿಮಾನ ಒಂದು ಉಪಯುಕ್ತವಾದ ಯಂತ್ರವಾದರೂ, ಎಲ್ಲಕ್ಕಿಂತಲೂ ಹೆಚ್ಚಾಗಿ ಅದರ ಧ್ವನಿ ಕರ್ಣಕಠೋರ. ಆಕಾರವಂತೂ ವಿಶ್ವಾಂಡವನ್ನೇ ಹೊತ್ತಂತೆ ಇದೆ.

'ವಿಮಾನ ನೆತ್ತಿಯ ಮೇಲೆ ಹಾರಿಹೋದರೇ ಇಷ್ಟು ಬೆದರುವವರು, ಇನ್ನು ಒಳಗೆ ಕುಳಿತು ಅದರಲ್ಲಿ ಪ್ರಯಾಣಮಾಡಿದರೆ ಗತಿಯೇನು?' ಎಂದು ಕೇಳಬಹುದು. ಇದಕ್ಕೆ ನನ್ನ ಅಂತರಾತ್ಮ ಸರಿಯಾದ ಉತ್ತರಕೊಡಲು ಸಿದ್ಧವಾಗಿಲ್ಲ. ಏಕೆಂದರೆ ಕೋಲಿನಲ್ಲಿ ಒದೆ ತಿನ್ನುವುದಕ್ಕೂ, ಕೋಲನ್ನು ಮುಟ್ಟುವುದಕ್ಕೂ ವ್ಯತ್ಯಾಸವಿದೆ. ಅದೇರೀತಿ ಏರೋಪ್ಲೇನಿನೊಳಗೆ ಕೂತರೆ, ನಮ್ಮಂತೆಯೇ ಅನೇಕ ಅಸಹಾಯಶೂರರು ಅಲ್ಲಿ ಕುಳಿತಿರುತ್ತಾರೆ. ವಿಮಾನ ಹೊರಡುವ ಮುನ್ನ ಯಾರ ಮುಖದಲ್ಲಿಯೂ ಗೆಲುವು ಇರುವುದಿಲ್ಲ. ಅದರಲ್ಲೂ ಮೊದಲ ಸವಾರಿಯಾದರಂತೂ ಆ ಮಹಾನುಭಾವರನ್ನು ದೇವರೇ ಕಾಪಾಡಬೇಕು. ಜೀವಗಳ್ಳರಾದರೆ, 'ಅಷ್ಟುದೂರ ನಡೆದುಕೊಂಡಾದರು ಹೋದೇವು, ಆದರೆ ಈ ರಾಕ್ಷಸನ ಸಹವಾಸ ನಮಗೆ ಬೇಡವೇಬೇಡ' ಎನ್ನುತ್ತಾರೆ. ಈ ರೀತಿ ಮೊದಲನೇ ಬಾರಿ ಆಗುವುದು ಸಹಜವೇ ಸರಿ. ಆದರೆ ಅಭ್ಯಾಸವಾದಂತೆ ಆದಂತೆ ವಿಮಾನವನ್ನು ಬಿಟ್ಟು ಕೆಳಗಿಳಿದು ಬರುವುದಕ್ಕೇ ಮನಸ್ಸಿರುವುದಿಲ್ಲ. ಇದು ವಿಮಾನದಲ್ಲಿ ಕೂತರೆ ಆಗುವ ಅನುಭವ.

ನಾವು ಕೆಳಗೆ, ವಿಮಾನ ನಮ್ಮ ನೆತ್ತಿಯ ಮೇಲೆ ಇದ್ದರೆ ನಮ್ಮ ಭಯಭೀತಿಗಳು ವರ್ಣಿಸಲು ಅಸಾಧ್ಯವಾದುದು. ಆ ಅನುಭವ ಅನುಭವ

ಪಟ್ಟವರಿಗೇ ಗೊತ್ತು. ಅದು ಒಂದು ವೇಳೆ ಅಂತರಿಕ್ಷದಲ್ಲಿ ಯಾವುದೋ ಮೂಲೆಯಲ್ಲಿ ಹಾರುತ್ತಿದ್ದರೆ ನಾವು ಅದನ್ನು ಅಷ್ಟು ಮನಸ್ಸಿಗೆ ತೆಗೆದುಕೊಳ್ಳುವುದಿಲ್ಲ. ಏಕೆಂದರೆ ನಾವೆಲ್ಲೋ, ವಿಮಾನವೆಲ್ಲೋ? ಅದರಲ್ಲಿರುವವರೆಲ್ಲಾ ದೇವಲೋಕದ ಗಂಧರ್ವರು, ಅಂತರಿಕ್ಷದಲ್ಲಿ ಹಾರಲು ಬಲ್ಲವರು; ಆದರೆ ನಾವು ಭೂಲೋಕದ ನಿವಾಸಿಗಳು. ನಮಗೂ ಆ ಐಶ್ವರ್ಯವಂತರಿಗೂ ಎಲ್ಲಿ ಸಂಬಂಧ? ಎಂದು ನಮ್ಮ ಕೆಲಸದ ಕಡೆ ಗಮನಕೊಡುತ್ತೇವೆ. ಆದಾಗ್ಯೂ, ಆಕಾಶದ ಕಡೆ ಒಂದು ಸಲ ನೋಡಿ, ಆ ಪುಣ್ಯವಂತರ ಕಡೆ ಒಂದು ಸಲ ಮಂದಹಾಸದ ನಗೆ ಬೀರುತ್ತೇವೆ.

ಒಂದು ವೇಳೆ, ಈ ವಿಮಾನ ನಮ್ಮ ನೆತ್ತಿಯ ಮೇಲೆಯೇ, ಎಂದರೆ ನಮ್ಮ ತಲೆಗೂ ವಿಮಾನದ ಗಾಲಿಗೂ ಸುಮಾರು ಒಂದು ತೆಂಗಿನ ಮರದ ಅಂತರವಿದ್ದರೆ, ಆಗ ಮನುಜನ ಪಾಡು ಯಾವ ನಾಯಿಗೂ ಬೇಡ. ನಮ್ಮ ಅಧೈರ್ಯವನ್ನು ಕಂಡು ವಿಮಾನದ ಒಳಗೆ ಕುಳಿತು ನೋಡುತ್ತಿರುವ ಗಂಧರ್ವರು ಪರಿಹಾಸ್ಯಮಾಡುತ್ತಾರೆ.

ಇದೇ ಸಮಯದಲ್ಲಿ ಇನ್ನೊಂದು ಸಣ್ಣ ಘಟನೆ ಜ್ಞಾಪಕಬರುತ್ತದೆ. ಈಗ ಹತ್ತು ವರ್ಷಗಳ ಮಾತು. ಬೆಂಗಳೂರಿಗೆ ಬಾಂಬುಹಾಕುತ್ತಾರೆಂದು ಜನಗಳು ಹೆದರಿ ಚಲ್ಲಾಪಿಲ್ಲಿಯಾಗಿದ್ದರು. ಕೆಲವರು ಮನೆ ಮಠಗಳನ್ನು ಮಾರಿ ಭೂಮಿಯಲ್ಲಿ ಸುರಂಗ ತೋಡಿಸಿ ಅದರಲ್ಲಿ ವಾಸಮಾಡುತ್ತಿದ್ದರು. ಇನ್ನು ಕೆಲವರು ಮಲೆನಾಡಿನ ಕಡೆ ವಲಸೆಹೋಗಿದ್ದರು. ನಾವು ಕೂಡ ಬೆದರಿ, ಮಲೆನಾಡಿಗೆ ಹೊರಟುಹೋಗಿದ್ದೆವು. ನಮ್ಮ ಜೊತೆಯಲ್ಲಿ ನಮಗೆಲ್ಲಾ ಬಹಳ ಪ್ರಿಯವಾಗಿದ್ದ ಸೀನಿಯರ್ ಅಜ್ಜಯ್ಯನನ್ನು ಕರೆದುಕೊಂಡು ಹೋಗಿದ್ದೆವು. ಇದೇನು, ಈ ಮಹಾನುಭಾವ Senior ಅಜ್ಜಯ್ಯ ಎಂದು ಬರೆದಿದ್ದಾನಲ್ಲ, ಇದರ ಅನ್ವಯಾರ್ಥವೇನು, ಎಂದು ಕೇಳಬಹುದು. ಇವರು ನಮ್ಮ ಅಜ್ಜಂದಿರುಗಳೆಲ್ಲರಿಗಿಂತಲೂ ವಯಸ್ಕರು ಮತ್ತು ಇವರನ್ನು ನಾವು ರಾಮಾಯಣದ ಕಾಲದವರೆಂದು ಕರೆಯುತ್ತಿದ್ದುದೂ ಉಂಟು. ಇವರಿಗೆ ಪೂರ್ವಕಾಲದ ಜ್ಞಾನ ಅಷ್ಟು ಅಧಿಕವಾಗಿತ್ತು. ಇಷ್ಟೇ ಅಲ್ಲದೆ ವಯಸ್ಸು ನೂರರ ಗಡಿಯನ್ನು ಸೇರಲು ಪ್ರಯತ್ನಿಸುತ್ತಿತ್ತು. ಆದ್ದರಿಂದ ಇವರಿಗೆ ನಾವು Senior ಅಜ್ಜಯ್ಯ ಎಂದು ಬಿರುದು ಕೊಟ್ಟಿದ್ದೆವು.

ಒಂದು ದಿವಸ ಬೆಳಗ್ಗೆ ಎಂಟು ಗಂಟೆ ಸುಮಾರಿಗೆ ನಮ್ಮ Senior ಅಜ್ಜಯ್ಯ ಹಿತ್ತಲ ಕಡೆಗೆ ಹೋದರು. ಅವರ ಅದೃಷ್ಟವೋ ನಮ್ಮ ಅದೃಷ್ಟವೋ ಗೊತ್ತಿಲ್ಲ, ಇದ್ದಕ್ಕಿದ್ದಂತೆ ಒಂದು ಬೃಹದಾಕಾರದ ವಿಮಾನವು ಪೂರ್ವದ ಕಡೆ ಯಿಂದ ಕಿರಿಚುತ್ತಾ ನಮ್ಮ ತಲೆಯ ಮೇಲೆ ಹಾರಿಹೋಯಿತು. ಮನಸ್ಸೆಲ್ಲಾ ಬಾಂಬಿನ ಮಯವಾಗಿದ್ದ ನಮ್ಮ ಸೀನಿಯರ್ ಅಜ್ಜಯ್ಯ ಈ ವಿಮಾನ ಬಂದಿರುವುದು ಬಾಂಬು ಹಾಕುವುದಕ್ಕೇ ಎಂದು ತಿಳಿದು, ಪ್ರವೃತ್ತಿಗೆಂದು ಹೋಗಿದ್ದವರು, ಶುಚಿರ್ಭೂತರಾಗದೆ, ವಿಮಾನದ ಶಬ್ದಕ್ಕೆ ಹೆದರಿ ಕಿರಿಚುತ್ತಾ ಒಳಗೆ ಓಡಿಬಂದರು. ಇವರ ಕೂಗು, ಆ ವಿಮಾನದ ಕೂಗಿಗೆ ಮೂರರಷ್ಟಿ ತ್ತೆಂದು ಕಾಣುತ್ತದೆ. ಅಂದು ಇವರ ಕೂಗಿಗೋ, ಇಲ್ಲವೆ ವಿಮಾನದ ಭೋರ್ಗರೆತಕ್ಕೋ, ಒಟ್ಟಿನಲ್ಲಿ ಮನೆಯವರೆಲ್ಲ ತಲ್ಲಣಿಸಿಹೋದೆವು. Senior ಅಜ್ಜಯ್ಯನ ಚೀತ್ಕಾರ ಇಂದಿಗೂ ನನ್ನ ಕಿವಿಯಲ್ಲಿ ಭೋರ್ಗರೆಯುತ್ತಿದೆ. ಇದು ಮಹಾ ದೊಡ್ಡ ಕೂಗೋ? ಎಂದು ಪ್ರಶ್ನಿಸಬಹುದು. ಆದರೆ ಅದು ಅನು ಭವಿಸಿದವರಿಗೇ ಗೊತ್ತು. ಒಟ್ಟಿನಲ್ಲಿ ವಿಮಾನ ನೆತ್ತಿಯ ಮೇಲೆ ಹಾರಿಹೋದಾಗ ನಡೆದ ಅಂದಿನ ಘಟನೆ ಅಪೂರ್ವವಾದುದು, ಎಂದರೆ ಮರೆಯಲಸಾಧ್ಯ.

ಇಂತಹ ಘಟನೆಗಳು ಜನಸಾಮಾನ್ಯರಾದ ನಮಗೆ ಸರ್ವಸಾಮಾನ್ಯ. ಆದಾಗ್ಯೂ ಈ ವಿಮಾನವೆಂಬುದೊಂದು ಬಂದು ದೌರ್ಭಾಗ್ಯರಾದ ನಮ್ಮನ್ನು ತಲ್ಲಣಗೊಳಿಸಿದೆ. ವಿಮಾನದಲ್ಲಿ ಅತ್ಯಂತ ಅಪ್ರಿಯವಾದ ವಿಷಯವೆಂದರೆ ಅದರ ಶಬ್ದ. ಅದೊಂದು ಹೇಗಾದರೂ ಪರಿಚಯವಾದರೆ ಈ ಯುಗಕ್ಕೆ ನಾವು ಧನ್ಯರೇ ಸರಿ.

ಅದು ಹೇಗಾದರೂ ಇರಲಿ, ಒಟ್ಟಿನಲ್ಲಿ ಈ ಪ್ರಬಂಧ ಓದಿದವರಿಗೆ ಒಂದು ಮನವಿ. ಅಕಸ್ಮಾತ್ ಎಂದಾದರೂ ನಿಮ್ಮ ತಲೆಯ ಮೇಲೆ ವಿಮಾನ ಹಾರಿ ಹೋದರೆ, ಆಗ ಮರೆಯದೆ, ನಿಮ್ಮ ತಲೆ ಹಾರಿಹೋಗದೆ ಸರಿಯಾಗಿದೆಯೋ ಇಲ್ಲವೋ ಎಂದು ಮುಟ್ಟಿ ನೋಡಿಕೊಳ್ಳಿ!

—ಬಿ. ವಿ. ವೆಂಕಟಾಚಲಪತಿ.

# ಮದುವೆ ಮನೆಯ ಸಂಗೀತ

ಸಂಗೀತ! ಸಂಗೀತವನ್ನು ಬಯಸದವರಾರು? ಸೊಬಗಿನ ಹಾಡುಗಳನ್ನು ಕೇಳಿ, ಹೃದಯ ನಲಿನಲಿದು ಉಬ್ಬಿ ಆನಂದಲಹರಿಯಲ್ಲಿ ತೇಲಾಡತೊಡಗುವುದು. ಆತ್ಮ ವಿಕಾಸಗೊಂಡು ನರ್ತಿಸತೊಡಗುವುದು. ಕಟುಕನ ಮನಸ್ಸೂ ಈ ಕಲೆಯ ಪ್ರಭಾವದಿಂದ ಕರಗಿ, ರಕ್ತಪಿಪಾಸಿಯ ದಾಹವು ಕಲೋಪಾಸಕನ ಹಾದಿ ಹಿಡಿಯುವುದು. ಸಂಗೀತವನ್ನು ಕೇಳುತ್ತಿದ್ದರೆ, ತರಂಗ ಮಾಲೆಗಳು ಸುಳಿದು ಸುಳಿದು, ಹೃದಯದ ಆಳವನ್ನೆಲ್ಲಾ ಆವರಿಸಿಕೊಳ್ಳುವುವು. ಪ್ರವಹಿಸುವ ನಿರ್ಮಲಜಲದ ಕಲಕಲ ನಿನಾದದಂತೆ, ಮಂಜುಳ ಧ್ವನಿಯಿಂದ ಮನುಜನ ಮನಸ್ಸನ್ನು ಮಾತ್ರವಲ್ಲದೆ ಪಶು, ಪಕ್ಷಿ, ಪ್ರಾಣಿಗಳ ಗಮನವನ್ನೂ ಸೆಳೆಯುವುದು. ಕೇಳುವವರನ್ನು, ಹಾವಾಡಿಗನ ಪುಂಗಿಯಿಂದ ಮೈಮರೆತು ಮಂತ್ರಮುಗ್ಧವಾದ ಉರಗದಂತೆ, ನಿಶ್ಚೇತನರನ್ನಾಗಿ ಮಾಡಿ, ಅವರನ್ನು ರಸಾನಂದದಲ್ಲಿ ತೇಲಾಡಿಸುವುದು. ಶ್ರೋತೃಗಳು ಆ ಸಂಗೀತದ ಅರ್ಥ ಭಾವಗಳನ್ನು ಅರಿತಿರಲಿ ಅರಿಯದಿರಲಿ, ಅದನ್ನು ಹೇಳುವ ಧಾಟಿಗೆ, ನುಡಿಯ ಸೊಬಗಿಗೆ, ಮಂಜುಳ ಮನೋಹರ ಮಧುರ ರವಗಳಿಗೆ ಮುಗ್ಧರಾಗುವರು. ಈ ಸಂಗೀತಕಲೆಗೆ ಒಂದು ವಿಶಿಷ್ಟ ಗುಣವಿದೆ, ಸಾಮರ್ಥ್ಯವಿದೆ. ಸಾಮಾನ್ಯವಾಗಿ ಸುಮ್ಮನೆ ಹಾಡಿಕೊಂಡು ಹೋಗುವ ಪದ್ಯವನ್ನು ಅರ್ಥಮಾಡಿಕೊಳ್ಳುವುದು ಕೊಂಚ ಕಷ್ಟವೆನಿಸಬಹುದು. ಆದರೆ ಅದೇ ಪದ್ಯವನ್ನು ಸಂಗೀತಶಾಸ್ತ್ರಕ್ಕನುಸಾರವಾಗಿ ರಾಗಗಳಲ್ಲಿ ಹೇಳಿದರೆ ಅದರ ಭಾವ ಚೆನ್ನಾಗಿ ಮನದಟ್ಟಾಗುವುದು. ಸಂಗೀತವನ್ನು ಆಲಿಸುತ್ತಿದ್ದರೆ, ನಾವಿರುವ ಲೋಕವನ್ನೇ ಮರೆತು ಯಾವುದೋ ಒಂದು ರಮ್ಯತಮ ಸನ್ನಿವೇಶದಲ್ಲಿ, ಕಲ್ಪನಾ ಸಾಮ್ರಾಜ್ಯದಲ್ಲಿ ವಿಹರಿಸುವಂತೆ ತೋರುತ್ತದೆ. ಮೈ ಪುಳಕಿತವಾಗಿ, ಅಮಿತಾನಂದ ಲಹರಿ ತಾನೇತಾನಾಗಿ ಹರಿಯುತ್ತದೆ. ಈ ಜಗದ ಚಿಂತೆಯನ್ನು ಅಲ್ಪಕಾಲವಾದರೂ ಸಂಪೂರ್ಣವಾಗಿ ಮರೆತು ತನ್ನಲ್ಲಿಯೇ ತನ್ಮಯತೆಯುಂಟಾಗುವಂತೆ ಮಾಡುವ ಸಂಗೀತ ಯಾರಿಗೆ ಬೇಡ? ಎಳೆಹಸುಳೆಗಳಿಂದ ಹಣ್ಣು ಹಣ್ಣು ಮುದುಕರವರೆವಿಗೂ?

ಅದರಲ್ಲೂ ಮದುವೆಮನೆಯ ಸಂಗೀತ! ಅದರ ಮಾಧುರ್ಯದ ಸವಿಯನ್ನು ಕೇಳಬೇಕೆ? ಅದರ ಸೊಬಗು ವರ್ಣನಾತೀತವಾದುದು. ಅದರ ಬಣ್ಣನೆಗೆ ಸಾಕ್ಷಾತ್ ಶ್ರೀವಾಣಿಯ ಶಬ್ದಭಂಡಾರವನ್ನು ಸೂರೆಮಾಡಿದರೂ ಪದಗಳು ದೊರೆಯಲಾರವು! ಅಲ್ಲಿರುವಷ್ಟು ತರಹವಾರಿ ರಾಗಗಳನ್ನು ಮತ್ಯಾವ ಸಂಗೀತ ಮೇಳದಲ್ಲಿಯೂ ಕಾಣಲು ಸಾಧ್ಯವೇ ಇಲ್ಲ.

ಇನ್ನೂ ಉದಯಕಾಲದಲ್ಲಿಯೇ, ದಿನಮಣಿಯು ತನ್ನ ಸುವರ್ಣ ರಥವನ್ನೇರಿ ಕುಳಿತು, ಅಂಬರವೆಂಬ ಭವ್ಯ ಮಹಲಿನ ಮೊದಲ ಹಂತವನ್ನು ಏರುತ್ತಿದ್ದಂತೆಯೇ, ಉದಯರಾಗದ ಆಲಾಪನೆ ಪ್ರಾರಂಭವಾಗುತ್ತದೆ. ರವಿಯು ಕವಿಗಳ ಕಲ್ಪನೆಗೂ ಮೀರಿದ ಎತ್ತರವನ್ನು ತಲುಪುವ ಅಪರಾಹ್ನದ ವೇಳೆಗಾಗಲೆ, ಉದಯರಾಗದ ಆಲಾಪನೆಯು ಕಲ್ಯಾಣಿ ರಾಗಕ್ಕೆ ತಿರುಗುತ್ತದೆ. "ದಿನಕರನು ತನ್ನ ಕರ್ತವ್ಯಪಾಲನೆಯಲ್ಲಿ ಅತ್ಯಂತ ನಿಪುಣನು" ಎಂಬ ಮನುಜರ ಹೊಗಳಿಕೆಯನ್ನು ಕೇಳಿ, ನಾಚಿ, ಆತನ ಮುಖವೆಲ್ಲಾ ಲಜ್ಜೆಯಿಂದ ಕೆಂಪುವರ್ಣಕ್ಕೆ ತಿರುಗುವ ಸಂಜೆಯ ಹೊತ್ತಿಗೆ ಕಲ್ಯಾಣಿರಾಗ ಮುಗಿದು ಸಂಧ್ಯಾರಾಗಕ್ಕಾರಂಭವಾಗುತ್ತದೆ. ಸಭೆ ಸಮ್ಮೇಳನಗಳ ಅಂತ್ಯದಲ್ಲಿ ಮಂಗಳ ಗೀತೆಯನ್ನು ಹಾಡುವಂತೆ, ನಿಶಾರಾಣಿಯ ದರ್ಬಾರು ಆರಂಭವಾಗುತ್ತಲೇ ಚೌಚೌ ಸಂಗೀತದ (Orchestra) ಪ್ರಾರಂಭವೂ ಆಗಿ, ಮದುವೆ ಮುಕ್ತಾಯದ ಕೊನೆಯ ಹಂತಕ್ಕೆ ಬಂದಿರುತ್ತದೆ.

ಮದುವೆ ಮನೆಯ ಹೆಸರೆತ್ತಿದರೆ ಸಾಕು, ಪ್ರಪ್ರಥಮವಾಗಿ ನಮ್ಮ ಅಕ್ಷಿಪಟಲದ ಮೇಲೆ ಬೀಳುವ ಚಿತ್ರವೆಂದರೆ : ಸಡಗರ, ಸಂಭ್ರಮ, ಉತ್ಸಾಹ—ಉಲ್ಲಾಸ, ಕೋಪ—ತಾಪ, ಹರ್ಷ—ಶೋಕಗಳಿಂದ ಕೂಡಿದ ಒಂದು ಜಾತ್ರೆಯ ಪ್ರತಿಬಿಂಬ! "ನೂರು ಸುಳ್ಳುಗಳನ್ನು ಹೇಳಿಯಾದರೂ ಒಂದು ಮದುವೆ ಮಾಡಬೇಕು" ಎಂಬ ಲೋಕೋಕ್ತಿಯನ್ನೇ ತಮ್ಮ ಉದರ ಪೋಷಣೆಯ ಸಾಧನವನ್ನಾಗಿ ಮಾಡಿಕೊಂಡಿರುವ ಮಧ್ಯಸ್ಥಗಾರರ ಓಡಾಟ; "ವರದಕ್ಷಿಣೆಯ ಮೊತ್ತದಲ್ಲಿ ಚಿಕ್ಕಾಸಿನಷ್ಟೂ ಕಡಮೆಯಾಗಬಾರದು, ವರೋಪಚಾರಗಳೆಲ್ಲಾ ಚಾಚೂ ತಪ್ಪದೆ ನಡೆಯಬೇಕು" ಎಂಬ ಬಿಗುಮಾನದಿಂದ ಬೀಗುತ್ತಿರುವ ವರನ ಪಕ್ಷದವರ ಹಾರಾಟ; "ಸಾಲವೋ ಶೂಲವೋ! ಕನ್ಯಾದಾನಮಾಡಿ, ನಮ್ಮ ಹೊರೆಯನ್ನು ಇಳಿಸಿದರೆ ಸಾಕು!" ಎಂಬ ಅಂತರ್ವಾಣಿಯ

ಉಪದೇಶೋಕ್ತಿಯನ್ನೇ ಬಾಯಲ್ಲಿ ಗುಣುಗುಣಿಸುತ್ತಾ, ಗಡಿಬಿಡಿ, ಗಾಬರಿಗ ಳಿಂದ ಓಡಾಡುವ ವಧೂಪಕ್ಷದವರ ಕುಗ್ಗಾಟ; ಇವುಗಳೆಲ್ಲ ಸಂಮಿಶ್ರವಾಗಿ, ಅದರಿಂದ ಉಂಟಾಗುವ ನಾದಮಾಧುರ್ಯವು ವೀಣಾಪಾಣಿಯ ಮಂಜುಳ ರವವನ್ನು ಕೂಡ ಕಳಪೆಯಾಗಿ ಮಾಡಿಬಿಡುತ್ತದೆ. ವೀಣಾಪಾಣಿಯ ವರೆಗೂ ಏಕೆ? ಅದು ನಮಗೆ ಬಹಳ ದೂರದಲ್ಲಿರುವ, ಸಂಶಯಾಸ್ಪದವಾದ ಸ್ವರ್ಗದ ಮಾತಾಯಿತು. ನವೀನಕಾಲದ ಸುಮಧುರ ಕಲಕಂಠೆ ಲತಾಮಂಗೇಶ್‌ಕರಳ ಸಂಗೀತವನ್ನೂ ಮೀರಿಸಿಬಿಟ್ಟಿರುತ್ತದೆಂದರೆ ಅತಿಶಯೋಕ್ತಿಯಾಗಲಾರದು.

ಮದುವೆ ಮನೆಗೆ ಪ್ರವೇಶಮಾಡುವ ಮೊದಲೇ ಓಲಗದವರ ಗಾನ ಗಾಂಭೀರ್ಯವು ಒಂದು ಸಂಗೀತ ಕಛೇರಿಯಲ್ಲಿ ಕುಳಿತು, ಎಲ್ಲರಿಗಿಂತ ಹೆಚ್ಚಾಗಿ, ಎಲ್ಲರ ದೃಷ್ಟಿಕೋನಗಳನ್ನೂ ತನ್ನ ಕಡೆಗೆ ಸೆಳೆದು, ಉಚ್ಚಧ್ವನಿಯಲ್ಲಿ ಹಾಡು ತ್ತಿರುವ ಬಾಯಿ ಹಾಡುಗಾರಿಕೆಯಂತೆ ಕೇಳಿ ಬರುತ್ತಿರುತ್ತದೆ. ಹೆಬ್ಬಾಗಿಲನ್ನು ತಲುಪುವ ವೇಳೆಗೆ ಅಲ್ಲಿ ತಮ್ಮ ತಮ್ಮ ಸ್ಥಳಗಳನ್ನು ಕಾಯ್ದಿರಿಸಿಕೊಂಡು ಪಟ್ಟಾಗಿ ಕುಳಿತಿರುವ, ಸ್ಥಳ ಸಾಲದ ಒಂಟಿಕಾಲಿನ ಪಕ್ಷಿಗಳಂತೆ ಒಂದೇ ಕಾಲಮೇಲೆ ನಿಂತಿರುವ, ನಮ್ಮ ನಾಡಿನ ಅತ್ಯಧಿಕ ಸುಲಭವಾದ ಉದ್ಯೋಗಾ ವಲಂಬಿಗಳಾದ ಭಿಕ್ಷುಕರ ನಾದವು, ಹಾರ್ಮೋನಿಯಮ್ಮಿನ ನಾದದಂತೆ ಶ್ರುತ ವಾಗುತ್ತಿರುತ್ತದೆ. ಹೆಬ್ಬಾಗಿಲು ದಾಟಿ, ಧಾರೆಯ ಮಂಟಪದ ಕಡೆಗೆ ನಮ್ಮ ದೃಷ್ಟಿಯನ್ನು ಹೊರಳಿಸಿದರೆ, ಅಲ್ಲಿ ಪ್ರಪ್ರಥಮವಾಗಿ, ನಮ್ಮ ಗಮನವನ್ನು ಆಕರ್ಷಿಸುವ ಸಾಧನವೆಂದರೆ, ನಾನಾ ಬಣ್ಣದ, ಬಗೆಬಗೆಯ ಚಿತ್ರಗಳ ಸೀರೆ ಗಳನ್ನುಟ್ಟು, ಪತಂಗಗಳಂತೆ ಕಂಗೊಳಿಸುತ್ತಿರುವ ಸ್ತ್ರೀಯರ ಸಮೂಹ. ಓಬೀ ರಾಯನ ಕಾಲದಿಂದ ಹಿಡಿದು, ಇಂದಿನ ವಿಜ್ಞಾನಯುಗದವರೆಗಿನ ರಮಾಮಣಿ, ಬಾಲಾಮಣಿ, ಬೆನಾರಿಸ್, ಕಂಚಿ, ಧರ್ಮಾವರ, ಬಾರ್ಬನ್ ಸೀರೆಗಳಿಂದ, ನವೀನಕಾಲದ ಜಾರ್ಜೆಟ್, ಕ್ರೇಪ್, ಟಿಷ್ಯೂ ಸೀರೆಗಳವರೆಗೂ, ಪ್ರದರ್ಶನಾ ಲಯದಲ್ಲಿಯೂ ಅಷ್ಟು ವೈವಿಧ್ಯತೆಯಿಲ್ಲದಂತಹ ಮಾದರಿಗಳು ಕಾಣಬರುತ್ತವೆ. ಇವುಗಳ ತೂಕದ ಜೊತೆಗೆ, ಬೆಂಡೋಲೆ, ಬಿಚ್ಚೋಲೆ, ಜೋಮಾಲೆಸರ, ಅಡ್ಡಿಕೆ, ನಾಗಮುರಿ, ಡಾಬುಗಳಿಂದ ಆರಂಭವಾಗಿ, ನೆಕ್‌ಲೆಸ್, ಮಲ್ಲಿಗೆಸರ, ಮಾವಿನಕಾಯಿ ಸರ, ನಾನಾ ಮೃಗಪಕ್ಷಿಲತೆಗಳಾಕಾರದ ಕಿವಿಯಾಭರಣಗಳು, ಕಂಠಾಭರಣಗಳ ಭಾರವನ್ನೂ ಲೆಕ್ಕಿಸದೆ ಧರಿಸಿ, ತಮ್ಮ ಅಸಮಾನವಾದ ಶ್ರಮ

ಸಹಿಷ್ಣುತೆಯನ್ನು ವಿಶ್ವಕ್ಕೇ ಮನದಟ್ಟು ಮಾಡಿಕೊಡುತ್ತಿರುವ ನಾರೀಮಣಿಯರ ಸಡಗರ, ಸಂಭ್ರಮಗಳನ್ನು ವರ್ಣಿಸಲಳವಲ್ಲ. ಅವರ ಆಭರಣ ಉಡುಪುಗಳ ಪ್ರದರ್ಶನದ ಬೆಡಗಿನ ಧ್ವನಿ, ಇತರರ ವಸ್ತ್ರಗಳ ಮೇಲಿನ ಟೀಕಾ ಟಿಪ್ಪಣಿಗಳ ಮಂಜುಳ ರವವು ಯಾವ ಪಿಟೀಲಿನ ಮೃದು ಮಧುರ ಧ್ವನಿ ಮಾಧುರ್ಯಕ್ಕೂ ಕಡಮೆಯಿಲ್ಲ. ಅದರ ರಸಾನಂದವನ್ನು ಸವಿಯಬೇಕಾದರೆ ಮದುವೆಯ ಮನೆಗೇ ಹೋಗಬೇಕು.

ಇಂತಹ ವಿಶಿಷ್ಟ ಸೊಬಗಿನೊಡನೆ ಕಂಗೊಳಿಸುತ್ತಿರುವ ಲಲನಾಮಣಿಯರ ಜೊತೆಯಲ್ಲಿಯೇ ಬೆಂಬಾಲಹಿಡಿದು ಬಂದಿರುವ ಕೈಗೂಸುಗಳು, ಇಲ್ಲಿನ ಗಡಿಬಿಡಿ ಗಲಾಟೆಗಳನ್ನು ಕಂಡು ಗಾಬರಿಯಿಂದ, ತಾವೂ ಸಂಗೀತವನ್ನು ಹಾಡುವುದರಲ್ಲಿ ಕಡಮೆಯಿಲ್ಲವೆಂದು ತೋರ್ಪಡಿಸುವಂತೆ ಸಂಗೀತಾಲಾಪನೆಗೆ ತೊಡಗಿದರೆ, ಅದರ ನಿನಾದವು ಆ ಮದುವೆಮನೆಯೆಂಬ ಸಂಗೀತ ಮೇಳದ ಕೊಳಲಿನ ನಿನಾದದ ಕುಂದನ್ನು ನಿವಾರಿಸಿದಂತಾಗುತ್ತದೆ. ಅನಂತರ ದೃಷ್ಟಿಗೋಚರವಾಗುವುದು—ಆ ಪ್ರದೇಶದಲ್ಲೆಲ್ಲ ತಮ್ಮದೇ ಆದ ಸಾಮ್ರಾಜ್ಯವನ್ನು ಸ್ಥಾಪಿಸಿಕೊಂಡು, ವಿವಿಧವಾದ ವಸ್ತ್ರಾಭರಣಾಲಂಕಾರಗಳಿಂದ ಶೋಭಿಸುತ್ತಾ, ಹುಲ್ಲೆಯ ಮರಿಗಳಂತೆ ಸ್ವೇಚ್ಛೆಯಿಂದ, ಎಲ್ಲೆಲ್ಲೂ ಸುಳಿದಾಡುತ್ತಿರುವ ಮಕ್ಕಳ ತಂಡ! ಅವರ ಉಲ್ಲಾಸ, ಆನಂದ, ಅಟ್ಟಹಾಸಗಳಿಂದೊಡಗೂಡಿದ ಕಿಲಕಿಲ ನಗುವಿನ ಮನೋಹರ ನಾದವು "ತಂಬೂರಿಯ ಶ್ರುತಿ"ಯಂತೆ ಕರ್ಣಾನಂದವಾಗಿರುತ್ತದೆ.

ಇನ್ನು ವಧೂಪಕ್ಷದವರ ಕಡೆ ನಮ್ಮ ದೃಷ್ಟಿಯನ್ನು ಹೊರಳಿಸೋಣ! ಅಲ್ಲಿ ದೃಗ್ಗೋಚರವಾಗುವುದು—ಗಾಬರಿ, ಗಡಿಬಿಡಿ, ಶೋಕದ ಛಾಯೆ! ಚಿಕ್ಕಂದಿನಿಂದಲೂ ವಿಶೇಷ ಮಮತೆಯಿಂದ ಲಾಲಿಸಿ, ಪಾಲಿಸಿ, ಅರಗಿಳಿಯಂತೆ, ಮಲ್ಲಿಗೆ ಹೂವಿನಂತೆ ರಕ್ಷಿಸಿದ ಹೆಣ್ಣುಮಗಳನ್ನು, ಗಾಣಕ್ಕೆ ಕೊಟ್ಟಂತೆ ಅಪರಿಚಿತರ ಕೈಗೆ ಒಪ್ಪಿಸಬೇಕಲ್ಲಾ ಎಂಬ ವಧುವಿನ ಮಾತಾಪಿತೃಗಳ ಚಿಂತಾಂಬುಧಿಗೆ ತುದಿಮೊದಲಿಲ್ಲ. ವಧುವಿನ ಸ್ಥಿತಿಯಾದರೋ, ಮಮತೆ ಪ್ರೀತಿಗಳ ಮೂರ್ತಸ್ವರೂಪರಂತಿರುವ ತಾಯಿತಂದೆಗಳನ್ನು ತ್ಯಜಿಸಿಬೇಕಲ್ಲಾ ಎಂದು "ಇತ್ತ ಪುಲಿ, ಅತ್ತ ದರಿ" ಎಂಬ ಧರ್ಮಸಂಕಟ. 'ವಿವಾಹಕಾರ್ಯಗಳೆಲ್ಲಾ ಸಾಂಗೋಪಾಂಗವಾಗಿ ನಡೆಯುತ್ತಿವೆಯೋ? ಇಲ್ಲವೋ? ಏನಾದರೂ

ಅರಿವು ಮರೆವುಗಳಿಂದ ತಪ್ಪುಗಳಾಗಿವೆಯೋ?' ಎಂಬ ಗಾಬರಿ, ಗಡಿಬಿಡಿಗಳಿಂದ ತಮ್ಮ ಇರವನ್ನೇ ಮರೆತು, ಇತರರ ಉಪಚಾರ ಆದರ ಸತ್ಕಾರಗಳಲ್ಲಿಯೇ ಮಗ್ನರಾಗಿರುವ ಕನ್ಯಾಬಂಧುಗಳ ಭಯಭೀತಿಯ ಧ್ವನಿಯ ಮೇಲುರವವು ಆ ಸಂಗೀತಕಛೇರಿಯಲ್ಲಿನ "ವೀಣೆ"ಯ ಮನೋಹರವಾದ, ಇಂಪಾದ, ಮಂಜುಳ ರವವನ್ನು ಹೋಲುತ್ತದೆ.

ಅಲ್ಲಿಂದಾಚೆಗೆ ನಮ್ಮ ದೃಷ್ಟಿಯನ್ನು ವಿವಾಹ ಮಂಟಪಕ್ಕೆ ಆಹ್ವಾನಿತರಾಗಿ ಆಗಮಿಸಿರುವ ಪುರುಷವೃಂದದ ಕಡೆಗೆ ಹೊರಳಿಸಿದರೆ, ಅಲ್ಲಿ ಯಾವುದೋ ಒಂದು ಮನುಜ ಸಂಗ್ರಹಾಲಯದ ಬಗೆಬಗೆಯ ವಿಕಾರರೂಪಿನ, ಬಣ್ಣದ, ವ್ಯಕ್ತಿಗಳಂತೆ ಕಾಣಬರುವುದು. ಅವರ ನಾನಾ ವರ್ಣಗಳ, ಮೊಲ ಆಮೆಗಳಿಂದ ಹಿಡಿದು ಚಲನಚಿತ್ರ ನಟನಟಿಯರ ಚಿತ್ರಗಳಿಂದಲಂಕೃತವಾದ ಉಡುಪುಗಳು, "ಸ್ತ್ರೀಯರೆ, ನೀವು ಮಾತ್ರ ಅಲಂಕಾರ ಪ್ರಿಯರಲ್ಲ! ನಾವೂ ನಿಮ್ಮ ಸರಿಸಮಾನರು" ಎನ್ನುವ ಭಾವವನ್ನು ತೋರ್ಪಡಿಸುತ್ತಿರುವ ಅವರ ಠೀವಿ, ಅಂದಚೆಂದಗಳನ್ನು ಪ್ರದರ್ಶಿಸುತ್ತವೆ. ಲಲನೆಯರಿಗಿಂತಲೂ ಹೆಚ್ಚಿನ ಶ್ರದ್ಧೆವಹಿಸಿ, ಕುರುಳನ್ನು ನಾನಾ ಬಗೆಯ ತೈಲಗಳಿಂದ ಸಿಂಗರಿಸಿಕೊಂಡು, ಸಾಕ್ಷಾತ್ ಕೈಲಾಸಾಧಿಪತಿಯ ಪರಮ ಭಕ್ತರಂತೆ ವಿದೇಶೀ ಭಸ್ಮದಿಂದ ಬೆಳಗುತ್ತಾ, ಕುಳಿತರೆ ಎಲ್ಲಿ ಇಸ್ತ್ರಿ ಹಾಳಾಗುವುದೋ ಎಂದು ಅಲ್ಲಿಂದಿಲ್ಲಿಗೆ ಓಡಾಡುವುದರಲ್ಲಿಯೇ ಕಾಲಯಾಪನೆಮಾಡುತ್ತಿರುವ ನವೀನಕಾಲದ ಯುವಕರ ತಂಡದ ಘನತೆಯನ್ನು ಬಣ್ಣಿಸಲು ಸಾವಿರ ನಾಲಗೆಗಳುಳ್ಳ ಆದಿಶೇಷನಿಂದಲೂ ಅಸಾಧ್ಯ! ಇನ್ನು ಬಡಲೇಖನಿಯ ಪಾಡೇನು! ಅವರವರಲ್ಲಿಯೇ ಪಾಠಪ್ರವಚನಗಳಿಂದ ಹಿಡಿದು ಪಾರ್ಲಿಮೆಂಟಿನ ವರೆವಿಗೂ, ಆಹಾರ ಸಮಸ್ಯೆಯಿಂದ ಹಿಡಿದು ನಟನಟಿಯರ ಸಮಸ್ಯೆಗಳ ವರೆವಿಗೂ ನಡೆಯುವ ಬಿಸಿ ಬಿಸಿ ಚರ್ಚೆಯ ಧ್ವನಿ ಸಮೂಹವು "ಮದ್ದಲೆ"ಯ ನಿನಾದವನ್ನು ಮೀರಿಸಿಬಿಡುತ್ತದೆ.

ಇನ್ನು ವರನ ಕಡೆಯವರು! ಅವರಾದರೋ ತಾವು ವರನ ಪಕ್ಷದವರೆಂಬುದು ಇತರರಿಗೆ ತಿಳಿಯಲೆಂಬ ಉದ್ದೇಶದಿಂದ ಸಾಧ್ಯವಾದಷ್ಟು ಗಟ್ಟಿಯಾದ ಧ್ವನಿಯಲ್ಲಿ ಮಾತನಾಡುತ್ತಾ, ವಧೂಪಕ್ಷದವರ ಕಾರ್ಯಕಲಾಪಗಳಲ್ಲಿ ಕುಂದುಗಳನ್ನರಸುತ್ತಾ, ತಮ್ಮದೇ ಆದ ಒಂದು ವೈಶಿಷ್ಟ್ಯದೊಡನೆ ವಿಜೃಂಭಿಸು

ತ್ತಿರುತ್ತಾರೆ. ವಿವಾಹಕ್ಕಾಗಮಿಸಿರುವ ಅತಿಥಿ ಅಭ್ಯಾಗತರನ್ನು ಉಚ್ಚಸ್ವರದೊಡನೆ ಸ್ವಾಗತಿಸುವುದರಲ್ಲಿ ತಮ್ಮ ಘನತೆ ದರ್ಪಗಳನ್ನು ತೋರ್ಪಡಿಸುವ ಇವರ ನಾದಸಮೂಹವು ಉಚಿತವಾಗಿಯೇ "ತಬಲ" ನಾದವನ್ನು ಒದಗಿಸುತ್ತದೆ.

ಅಂತ್ಯದಲ್ಲಿ ಉಳಿದಿರುವವರು, ಎಲ್ಲರಿಗಿಂತಲೂ ಶ್ರೇಷ್ಠಸ್ಥಾನವನ್ನು ಆಕ್ರಮಿಸಿರುವ ಪುರೋಹಿತ ವರ್ಗದವರು. ನಮ್ಮ ಹಿಂದೂ ಸಮಾಜದಲ್ಲಿ ವಿವಾಹವು ಪುರೋಹಿತರಿಲ್ಲದಿದ್ದರೆ ನಡೆಯುವಂತೆಯೇ ಇಲ್ಲ. ದೇವತೆಗಳಲ್ಲಿ ದೇವಗುರುವಾದ ಬೃಹಸ್ಪತಿಗಿದ್ದಷ್ಟು ಸ್ಥಾನ. ಅವರಿಲ್ಲದಿದ್ದರೆ ವಿದ್ಯುಚ್ಛಕ್ತಿಯಿಲ್ಲದ ಯಂತ್ರದಂತೆ, ಕಾರ್ಯಾರಂಭವಾಗುವುದೇ ಇಲ್ಲ. ಅವರು ಎತ್ತರಿಸಿದ ದನಿಯಲ್ಲಿ ಉಚ್ಚರಿಸುವ ಪವಿತ್ರ ಶ್ಲೋಕಗಳ ಇಂಪಾದ ದನಿ ಗಾಂಭೀರ್ಯವು ಮತ್ತೊಬ್ಬ ಬಾಯಿ ಹಾಡುಗಾರಿಕೆಯವನ ಹಾಡಿನಂತೆ ಗಂಭೀರವಾಗಿ ಘೋಷಿಸಲ್ಪಡುತ್ತಿರುತ್ತದೆ. ಒಂದು ಸಂಗೀತ ಮೇಳ (Orchestra)ದಲ್ಲಿ ಇರಬೇಕಾದ ಹಾರ್ಮೋನಿಯಂ, ವೀಣೆ, ಪಿಟೀಲು, ತಂಬೂರಿ, ಮದ್ದಲೆ, ತಬಲ, ಕೊಳಲು ಮುಂತಾದ ವಾದ್ಯಗಳೆಲ್ಲವೂ ಒಂದು ಮದುವೆಯ ಮನೆಯಲ್ಲಿ ಸ್ವಾಭಾವಿಕವಾಗಿಯೇ ದೊರೆಯುತ್ತವೆ. ಸಾಮಾನ್ಯವಾಗಿ ಆರ್ಕೆಸ್ಟ್ರಾಗಳಲ್ಲಿ ಇಬ್ಬರು ಬಾಯಿಹಾಡುಗಾರಿಕೆಯವರಿರುತ್ತಾರೆ; ಒಬ್ಬರು ಸ್ವಲ್ಪ ವಿಶ್ರಾಂತಿ ತೆಗೆದುಕೊಂಡರೆ, ಮತ್ತೊಬ್ಬರು ವಿರಾಮವನ್ನು ಮುಕ್ತಾಯಗೊಳಿಸಿಕೊಂಡು ಹಾಡುತ್ತಾರೆ. ಹಾಗೆಯೇ ಈ ನಮ್ಮ ಆರ್ಕೆಸ್ಟ್ರಾದಲ್ಲಿ ಪುರೋಹಿತರ ಮಂತ್ರೋಚ್ಚಾರಣೆಯ ಗಂಭೀರ ನಿನಾದವು ನಿಲ್ಲುವವರೆವಿಗೂ ಓಲಗದವರು ವಿರಾಮವನ್ನು ಹೊಂದಬಹುದು. ಅವರು ಊದುವಾಗ ಪುರೋಹಿತರು ತಮ್ಮ ಅಮರ ಸಂಗೀತಾಲಾಪನೆಯನ್ನು ನಿಲ್ಲಿಸಿರಬೇಕಾಗುತ್ತದೆ.

ತಾರಾಮಿತ್ರನು ನಭರೂಪೀ ಸಿಂಹಾಸನವನ್ನೇರುವಷ್ಟರಲ್ಲಿ ಈ ಸಂಗೀತವೆಲ್ಲಾ ಕೊನೆಯ ಘಟ್ಟವನ್ನು ತಲಪಿರುತ್ತದೆ. ಬಳಿಕ ಆರತಕ್ಷತೆಯ ಶೋಭೆಯನ್ನು ನೂರ್ಮಡಿ ಬೆಳಗಿಸಲು ಒಂದು ಘನವಾದ ಸಂಗೀತ ಕಛೇರಿ ಇರಲೇ ಬೇಕು! ಆದರೆ ಇದು ಧನವ್ಯಯದಿಂದಲೇ ಸಾಧ್ಯ. ಹಗಲು ಹೊತ್ತಿನಲ್ಲಿ ನಡೆಯುವ ಸಂಗೀತಮೇಳದಂತೆ ಇದು ಬೇಕಾಬಿಟ್ಟಿಯಲ್ಲ. ಎಷ್ಟೇ ಆಗಲಿ, ಧನಲಕ್ಷ್ಮಿಯ ಪ್ರಭಾವ! ಆಕೆಗೆ ಎಲ್ಲೆಲ್ಲಿಯೂ ಆದರ ಸತ್ಕಾರಗಳ ಸುರಿಮಳೆ

ಆದ್ದರಿಂದಲೇ ಈ ಆರ್ಕೆಸ್ಟ್ರಾವಿನ ವಿಜೃಂಭಣೆಯೇ ವಿಜೃಂಭಣೆ! ಆಗ ಒಬ್ಬೊಬ್ಬರಾಗಿ ಪರಿವಾರ ಸಮೇತವಾಗಿ, ಮಿತ್ರವೃಂದಗಳೊಡನೆ ಆಗಮಿಸುವ ಗಣ್ಯವ್ಯಕ್ತಿಗಳು ನೆಪಮಾತ್ರಕ್ಕೆ ಸಂಗೀತ ಬಲ್ಲವರಿಗಿಂತ ಹೆಚ್ಚಾಗಿ, ಅದರ ಶ್ರವಣದಿಂದ ಆನಂದವನ್ನು ವ್ಯಕ್ತಪಡಿಸುತ್ತಾ, ತಮ್ಮ ತಮ್ಮ ಭಾಗದ ವಸ್ತುಗಳು ಕೈವಶವಾದೊಡನೆ ಆ ಸ್ಥಳವನ್ನು ಮತ್ತೊಬ್ಬರಿಗೆ ದಾನಮಾಡಿ ಹೊರಡಲನುವಾಗುತ್ತಾರೆ. ಅಂತೂ ಮದುವೆಯ ಮನೆಯ ಸಂಭ್ರಮವೇ ಸಂಭ್ರಮ! ಮದುವೆಯ ಮನೆಯ ಸಂಗೀತದ ಸೊಗಸೇ ಸೊಗಸು!

—ಬಿ. ನಾರಾಯಣಮ್ಮ.

## ಸಾಹಿತ್ಯದಲ್ಲಿ ಶ್ರೇಣಿ

ಕುರಿವಂತು ಪೆರರ ಬಗೆಯಂ |
ತೆರೆದಿರೆ ಪೆರರ್ಗರಿಪಲಾರ್ಪವಂ ಮಾತರಿವಂ ||
ಕಿರಿದರೊಳೆ ಪಿರಿದುಮರ್ಥಮ |
ನರಿಪಲ್ ನೆರೆವಾತನಾತನಿಂದಂ ನಿಪುಣಂ ||

ನುಡಿಯಂ ಛಂದದೊಳೊಂದಿರೆ |
ತೊಡರ್ಚಲರಿವಾತನಾತನಿಂದಂ ಜಾಣಂ ||
ತಡೆಯದೆ ಮಹಾಧ್ವಕೃತಿಗಳ |
ನೊಡರಿಸಲಾರ್ಪಾತನೆಲ್ಲರಿಂದಂ ಬಲ್ಲಂ ||

ಮಾತರಿವರ್ ಕೆಲಬರ್ ಜಗ |
ತೀತಳಗತಮನುಜರೊಳಗೆ ಮಾತರಿವವರೊಳ್ ||
ನೀತಿವಿದರಮಳಕವಿತಾ |
ನೀತಿಯುತರ್ ಕೆಲರೆ ಪರಮಕವಿವೃಷಭರ್ಕಳ್ ||

# ಕಾಲೇಜು ದಾರಿಯ ದನಗಳು

ಬೆಳಗಿನಿಂದ ಸಾಯಂಕಾಲದ ವರೆಗೆ ಉಪಾಧ್ಯಾಯರು ಹೇಳಿದ್ದನ್ನೆಲ್ಲಾ ಕೇಳಿ, ಬರೆಸಿದ್ದೆಲ್ಲಾ ಬರೆದುಕೊಂಡು, ಅದು ಅರ್ಥವಾಯಿತೋ ಇಲ್ಲವೋ, ಅರ್ಥವಾಯಿತು ಎಂದು ತಲೆ ಅಲ್ಲಾಡಿಸಿ, ನಿಮಿಷಕ್ಕೆ ಐವತ್ತುಸಲ ಗಡಿಯಾರದ ಕಡೆ ನೋಡುತ್ತಾ, ಗಂಟೆ ಹೊಡೆಯುತ್ತಲೂ, ಕಟ್ಟೆ ಒಡೆದ ನೀರಿನ ಹಾಗೆ ಅಥವಾ ದೊಡ್ಡಿಯಿಂದ ದನ ಹೊರಬೀಳುವ ಹಾಗೆ ಚಿಮ್ಮಿಕೊಂಡು ಹೊರ ಬೀಳುವ ಹುಡುಗರಿಗೆ ಇತರರು ಇರುವುದೇ ಅರಿವಿರುವುದಿಲ್ಲವೆಂದು ಕಾಣುತ್ತೆ. ಚಾಮುಂಡಿಯ ಮೇಲೆ ಮಹಿಷ ನುಗ್ಗಿದ ಹಾಗೆ ನುಗ್ಗಿದ್ದೂ ನುಗ್ಗಿದ್ದೇ. "ಏನ್ರೀ, ದನ ಬಿದ್ದಹಾಗೆ ಮೇಲೆ ಬೀಳೋಕ್ಕೆ ಬರ್ತೀರಾ?" ಎಂದು ನನ್ನನ್ನು ಒದ್ದು, ನನ್ನನ್ನೇ ಗದರಿಸಿದ್ದೂ ಉಂಟು. ಸದ್ಯಕ್ಕೆ ನನ್ನನ್ನು ದನ ಮಾಡಿ, ಬೇರೆ ಸಹಸ್ರನಾಮದಿಂದ ಅರ್ಚಿಸಲಿಲ್ಲವಲ್ಲಾಂತ ಸಮಾಧಾನವಾಯ್ತು. ತತ್‌ಕ್ಷಣವೇ ನನಗೆ ಪ್ರೈಮರಿ ಎರಡನೇ ಕ್ಲಾಸಿನಲ್ಲಿ ಓದಿದ "ಇಟ್ಟರೇ ಸಗಣಿ ಯಾದೆ, ತಟ್ಟದರೆ ಕುರುಳಾದೆ" ಪದ್ಯ ಜ್ಞಾಪಕಕ್ಕೆ ಬಂತು. ನಾನು, ಐದು ನಿಮಿಷ, ಒಂದು ದನದ ಧ್ಯಾನದಲ್ಲಿದ್ದೆ. ಆವಾಗ ಅಂದುಕೊಂಡೆ: ಜ್ಞಾನಾ ರ್ಜನೆಗೆ ಬಂದಿರುವ ಈ ಅಜ್ಞಾನದ ಜನಕ್ಕಿಂತ ಆ ದನವೇ ಎಷ್ಟೋ ಪಾಲು ವಾಸಿ ಎಂದು. ಎಷ್ಟಾದರೂ ಅವುಗಳ ಒಡೆಯ ಗೋಪಾಲಕೃಷ್ಣ. ದನ ದನ ಎಂದು ಹಂಗಿಸುವ ಜನಗಳಿಗೆ ದನದ ಮಹಿಮೆ ಏನು ಎನ್ನುವುದೇ ಗೊತ್ತಿಲ್ಲ.

ಇಷ್ಟುದಿನ ಬೆಳಗಾಗಬೇಕಾದರೆ ಸೂರ್ಯದೇವರ ಕೃಪೆಯಿಂದ ಎಂದು ತಿಳಿದಿದ್ದೆ. ಅದು ತಪ್ಪು. ಬೆಳಗಾಗುವುದು ಕಾಫಿಯಿಂದ. ಕಾಫಿ ಇಲ್ಲದೆ ಇದ್ದರೆ, ಸೂರ್ಯ ನೆತ್ತಿಯ ಮೇಲಿರಲಿ, ೨೫ ಸಲ ಮುಳುಗಿ ಹುಟ್ಟಲಿ, ಪತ್ತೆಯೆ ಆಗುವುದಿಲ್ಲ. ಒಂದುವೇಳೆ ಕಾಫಿಗೆ ಬೇಕಾದ ಪುಡಿ, ಸಕ್ಕರೆ ಇಲ್ಲದೆ ಇದ್ದರೂ, ಹಾಲಾದರೂ ಕುಡಿಯಲೆಬೇಕು. ಮನುಷ್ಯ ಮೊದಲು ಕಲಿತದ್ದು ಹಾಲು ಕುಡಿಯುವುದು. ಆದ್ದರಿಂದ ದನದಿಂದಲೆ ದಿನ ಬೆಳಗುವುದು. ಆದ್ದರಿಂದಲೆ ನಮಗೆ "ಕ್ಷೀರಸಾಗರ" ಸದೃಶವಾದ ಗೋಮಾತೆಗೆ ನಮ್ಮ ಮೇಲೆ ದಯೆ ಇರಲಿ ಎಂದು ನಿತ್ಯವೂ ಪ್ರಾರ್ಥಿಸುತ್ತೇನೆ.

ಅದಕ್ಕೇ ಇರಬೇಕು, ಹಿಂದಿನ ಕಾಲದವರೆಲ್ಲ ಅಷ್ಟು ಭಕ್ತಿ ಶ್ರದ್ಧೆಗಳಿಂದ ಗೋವನ್ನು ಆರಾಧಿಸುತ್ತಿದ್ದುದು. ಆದರೆ ಈಗಿನ ಕಾಲದ ಫ್ಯಾಷನ್ನೇ ಬೇರೆ. ಎಲ್ಲಾ ಬಾಯಿಂದಲೆ ನಡೆಯಬೇಕು. ಅದಕ್ಕೆ ಸರಿಯಾಗಿ ಪರಿಸ್ಥಿತಿಗಳೂ ಹಾಗೇ ಇವೆ. ದಿನ ಬೆಳಗಾದರೆ ಗೊತ್ತೇ ಇದೆಯಲ್ಲ: ಓದಲಿ ಬಿಡಲಿ, ಕಾಲೇಜಿಗೆ ಮಾತ್ರ ಹೋಗುತ್ತಾ ಬರುತ್ತಾಯಿರುವುದು. ಅಂದರೆ, ಇದೂ ಬಹಳ ಸುಲಭ ಎಂದು ನಾನು ಅಂದುಕೊಂಡಿಲ್ಲ. ಏಕೆಂದರೆ ಕೆಲವರಿಗೆ ಸುಮ್ಮನೆ ಕೂಡ ಬೇಕು ಎಂದರೂ ಕೈಲಾಗುವುದಿಲ್ಲ. ಸ್ನೇಹಿತನ ಹತ್ತಿರ ಹಲ್ಲುಕಿರಿದು, ಬಾಯಿ ಬಿಟ್ಟು ಪ್ರಾಕ್ಸಿ ಹೇಳುವ ಹಾಗೆ ವಾಗ್ದಾನಪಡೆದು, "ಹೊಲಬುಗೆಟ್ಟ ಕರು ತಾಯನರಸುವಂತೆ" ಮನರಂಜನೆಗೋ ಅಥವಾ ತಮ್ಮ ತಾಪತ್ರಯ ಹರಿಸಿ ಕೊಳ್ಳುವುದಕ್ಕೋ ಹೋಗುವುದುಂಟು. ನನ್ನ ಮಟ್ಟಿಗೆ ಹೇಳುವುದಾದರೆ, ನನ್ನಲ್ಲಿ ಮೇಲೆ ಹೇಳಿದ ಗುಣಗಳಿಲ್ಲ. ನನ್ನ ಆತ್ಮ ಸ್ತುತಿಯನ್ನು ಕೇಳಿ ಬೆರಳನ್ನು ಮೂಗಿನ ಮೇಲೆ ಹತ್ತಿಸಬೇಡಿ.

ಹಾಗೂ ಹೀಗೂ ಒದ್ದಾಡಿಕೊಂಡು 10-30ಕ್ಕೆ ಶಾಲಾಭಿಮುಖವಾಗಿ ಹೊರಟರೆ ದಾರಿಯುದ್ದಕ್ಕೂ ವಿವಿಧವಾದ ನೋಟಗಳನ್ನು ನೋಡಬಹುದು. ಅವುಗಳಲ್ಲಿ ಈ ದನಗಳ ವಿಷಯದ ಕಡೆ ಒಂದು ಕಿರುನೋಟ ಬೀರೋಣ. ರೂಮಿನಿಂದ ಈಚೆ ಬಂದ ತತ್‌ಕ್ಷಣ ಒಂದು ಹಸು ತನ್ನ ಮುದ್ದಾದ ಎಳಗರುವಿ ನೊಡನೆ ರಸ್ತೆಯಲ್ಲಿ ನಿಂತಿತ್ತು. ಅದೂ ಬಾಗಿಲಲ್ಲೇ! ನನಗೆ ಬಹಳ ಸಂತೋಷ ವಾಯ್ತು. ಏಕೆಂದರೆ, ಎಲ್ಲಾದರೂ ಹೊರಹೊರಟರೆ, ಪ್ರಯಾಣಮಾಡಿದರೆ, ಒಳ್ಳೆಯ ಶಕುನವಾಗಬೇಕು—ಎಂದು ದೊಡ್ಡವರು ಹೇಳಿದ್ದು ಜ್ಞಾಪಕಕ್ಕೆ ಬಂದದ್ದರಿಂದ ಮನಸ್ಸಿನಲ್ಲೇ ಅದಕ್ಕೆ ಬಾಗಿ ನಮಸ್ಕರಿಸಿ, ಬೆನ್ನು ಸವರಿ, ಕೃತಜ್ಞತೆಯನ್ನು ತೋರಿಸಿದೆ. ಎಲ್ಲ ಸರಿಯೇ, ಬಾಗಿಲಿಗೆ ಅಡ್ಡನಿಂತದ್ದು ಕದಲಲೇ ಇಲ್ಲ. ನಿರ್ಭಯವಾಗಿ ಒಂದು ಸಲ ತನ್ನ ಹೊಳಪಾದ ಕಣ್ಣುಗಳನ್ನು ವಿಶಾಲವಾಗಿ ಸರಿಸಿ, ಕಿವಿಗಳನ್ನು ಕೊಡವುತ್ತ, ಮೂಗರಳಿಸಿ, ಮುಂಗಾರು ಮೊಳಗುವಂತೆ ಉಸಿರುಬಿಡುತ್ತಾ ತನ್ನ ಪೂರ್ಣಕಟಾಕ್ಷವನ್ನು ನನ್ನ ಕಡೆ ಬೀರಿತು. ನಾನೂ ಅದಕ್ಕೆ ಪ್ರತಿಸ್ಪರ್ಧಿಯಾಗಿ ಹಾಗೇ ನೋಡುತ್ತಿದ್ದೆ. ಆಗ ನನಗೆನ್ನಿಸಿತು: ನನಗಿಂತ ಹೆಚ್ಚಾಗಿ ತಿಳಿವಳಿಕೆ ಪಡೆದಿರುವ ಈ ದನ, ಈ ಮನುಷ್ಯ ದುರ್ವಿದ್ಯೆ ಕಲಿಯುವುದಕ್ಕೆ ದೊಡ್ಡಿಯಕಡೆ ಹೊರಟಿದ್ದಾನೆ ಎಂದು

ಅಂದುಕೊಂಡಿರಬಹುದೂಂತ! ಕಡೆಗೆ ನಾನೇ ಸೋಲುವ ಹೊತ್ತು ಬಂತು. ಅದನ್ನು ತಟ್ಟಿ, ದಾರಿ ಬಿಡಿಸಿಕೊಂಡು ಅವಸರ ಅವಸರವಾಗಿ ಹೊರಟೆ.

ಗೊತ್ತೇ ಇದೆಯಲ್ಲ ಬೆಂಗಳೂರು ಅಂದರೆ! ಬೆಳಗ್ಗೆಯಿಂದ ಸಾಯಂಕಾಲ ದವರೆಗೂ ಬಿಡುವಿಲ್ಲದೆ ದ್ವಿಚಕ್ರ, ತ್ರಿಚಕ್ರ, ಚತುಷ್ಚಕ್ರ ಇತ್ಯಾದಿ ವಾಹನಗಳು ಓಡಾಡುವ ಸ್ಥಳ. ನನಗೆ ಯಾವಾಗಲೂ ವ್ಯಸನವಾಗುತ್ತೆ-- ಒಂದು ಚಕ್ರದ ವಾಹನ ಮೊದಲು ಉಪಯೋಗಿಸದೆ, ಎರಡು ಮೂರು ಇತ್ಯಾದಿಗಳಿಗೆ ಏಕೆ ಕೈಹಾಕಿದರೂಂತ. ಈ ಒಂದು ಚಕ್ರದ ವಾಹನ ಉಪಯೋಗಿಸುವುದು ಸರ್ಕಸ್ಸಿನಲ್ಲಿ. ನನಗಾವಾಗಲೇ ತೋರಿದ್ದರೆ, ಅದನ್ನೆ ಧಾರಾಳವಾಗಿ ಉಪಯೋಗಿಸಿ ಬಿಡುತ್ತಿದ್ದೆ. ಮುಖ್ಯವಾದ ವಿಷಯ ಬಿಟ್ಟು ಏನೇನೋ ಹೇಳ್ತಾಯಿದ್ದೇನೆ. ಸದ್ಯಃ ಈಗ ಉಪಯೋಗಿಸುವ ವಾಹನಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳುವ ಸಾಮರ್ಥ್ಯವಿಲ್ಲವೆಂದು ಕಾಣುತ್ತೆ. ಆದರೆ ಮಧ್ಯೇ ಮಧ್ಯೇ ಬ್ರೇಕ್ ಇನ್ಸ್‌ಪೆಕ್ಟ್ ಮಾಡ್ತಾರೆ ಅಂತ ಕಾಣುತ್ತೆ. ಅವರಿಗೆಲ್ಲಾ ಸಂಬಳಕೊಟ್ಟು ಇಟ್ಟಿರುವುದು ತುಂಬ ವ್ಯರ್ಥ. ಅವರಿಗೆ ಬದಲಾಗಿ ರಸ್ತೆಮಧ್ಯದಲ್ಲಿ ನಿರ್ಭಯವಾಗಿ, ಸಾವಧಾನದಿಂದ, ಸರಳತೆಯಿಂದ, ಸಂದೇಹಾಸ್ಪದವಾಗಿ ಹೆಜ್ಜೆ ಇಡುತ್ತಾ ಸ್ವರ್ಗದಿಂದ ಇಳಿದುಬರುವ ಇಂದ್ರನ ಐರಾವತದಂತೆ ಎಮ್ಮೆಗಳು, ಈ ಬ್ರೇಕ್ ಇನ್ಸ್‌ಪೆಕ್ಟ್ ಮಾಡುವ ಭಾರ ಹೊರಲಿ ಎಂದು ದೇವರಿಂದ ನಿಯಮಿಸಲ್ಪಟ್ಟಿರುವ ಹಾಗೆ, ರಸ್ತೆಯಲ್ಲಿ ನಿಂತಿರುವಾಗ, ಬೇರೆ ಅಧಿಕಾರಿಗಳನ್ನೇಕೆ ನಿಯಮಿಸಬೇಕು? ಅಥವಾ ಡ್ರೈವರ್ ಸರಿಯಾಗಿ ತನ್ನ ಕೆಲಸದಲ್ಲಿ ಪಳಗಿದ್ದಾನೋ ಇಲ್ಲವೋ ಎಂಬುದನ್ನು ಪರೀಕ್ಷಿಸುವುದಕ್ಕೇನಾದರೂ ಬಂದಿರುವ ಪರೀಕ್ಷಕನ ಹಾಗೇ ರಸ್ತೆಯಲ್ಲಿ ನಿಂತಿರುತ್ತವೆ. ಸಾರಥಿ, ಮೊದಲು ಹಾರ್ನಮಾಡಿ, ಹಲ್ಲುಕಿರಿದರೂ ಇಲ್ಲ; ಬಾಯ್ಬಿಟ್ಟು ಬ್ರೇಕ್‌ಹಾಕಿ, ಬೊಬ್ಬೆ ಇಕ್ಕಿದರೂ ಇಲ್ಲ. ಯಾವ ಕುಹಕದ ಕಾರ್ಯವೂ ಅದರ ಸುಳಿವಿಗೆ ಬರುವಹಾಗೇ ಇಲ್ಲ. ಅಕಸ್ಮಾತ್, ಯಾರಾದರೂ ಹೀಗೆ ಬಸ್ಸಿಗೆ ಅಡ್ಡಬಂದಿದ್ದರೆ, ಅವರಿಗೆ ಬಿಟ್ಟಬಾಯ್ಗಳಿಂದ ಸಹಸ್ರನಾಮಾರ್ಚನೆಯೊಡನೆ ಪಂಚಾಮೃತದ ಅಭಿಷೇಕವೂ ನಡೆಯುವ ಸಂಭವ ಉಂಟು.

ಅದು ಪ್ರಾಣಿ. ನಾವೂ ಹಾಗೇ ಇದ್ದರೆ, ಎಷ್ಟು ಅನುಕೂಲ! ಅದಕ್ಕೆ ರಸ್ತೆಯನ್ನು ಹಾದುಹೋಗುವುದರಲ್ಲಿ ಎಷ್ಟು ಅಧಿಕಾರ! ಎಷ್ಟು ನಿರ್ಭಯ, ಎಷ್ಟು ನಿರ್ಲಕ್ಷ್ಯ! ಅದು ಸರ್ಕಾರದ ಯಾವ ಕಾನೂನಿಗೂ ಹೆದರುವುದಿಲ್ಲ.

ನಾವಾದರೋ, ಹಿಂದು ಮುಂದು ನೋಡಿ, ಅಂಗಡಿಗಳಲ್ಲೋ, ಮರಗಳ ಮರೆಯಲ್ಲೋ ಯಮದೂತರಂತೆ ಕಾದಿರುವ ಕಾನ್ಸ್ಟೇಬಲ್ ಕೈಗೆ ಸಿಕ್ಕಿ ಎಲ್ಲಿ ಕಣ್ಣು ಕಣ್ಣು ಬಿಡಬೇಕಾದೀತೋ ಎಂದು ಹೋಗಬೇಕಾಗುತ್ತೆ. ಆದರೆ ಒಂದು ಮಾತು: ರಸ್ತೆಯನ್ನು ಅಡ್ಡಲಾಗಿ ದಾಟಿದರೆ ತಪ್ಪೇನೂ ಇಲ್ಲ. ಕೆಲವು ಪೋಲೀಸರು, ತಮ್ಮ ದುಡ್ಡಿನ ತಾಪತ್ರಯಕ್ಕೋಸ್ಕರ, ರಸ್ತೆಯ ಮಧ್ಯದಲ್ಲಿ ನಡೆಯದವರನ್ನು ಕೂಡ, ನಡೆದಿರುವ ಹಾಗೆ ದಬಾಯಿಸಿ ಕೋರ್ಟಿನಲ್ಲಿ ಹಾಜರ್ ಮಾಡಿರುವ ಘಟನೆಗಳು ಎಷ್ಟೋ ನಡೆದಿವೆ.

ನನಗೆ ಸ್ನೇಹಿತರೆಂದರೆ ಹೃದಯಪೂರ್ವಕವಾದ ಪ್ರೇಮ. ಅದೂ ಹತ್ತಿರದ ಸ್ನೇಹಿತರು, ದೂರದವರಲ್ಲ. ಹತ್ತಿರದವರೆಂದರೆ ಇಬ್ಬರನ್ನೂ ಅರ್ಥ ಮಾಡಿಕೊಂಡವರು. ಆದರೆ ಅಂತಹ ಸ್ನೇಹಿತರು ವಿರಳ. ಎತ್ತು ಏರಿಗೆಳೆದರೆ ಕೋಣ ನೀರಿಗೆಳೆಯುತ್ತೆ. ಈ ಕಪಟ ಸ್ನೇಹಿತರ ಕುಹಕವಾದ, ಕುಯುಕ್ತಿಯ ಮಾತುಗಳಿಂದಲೂ ಕೃತ್ಯಗಳಿಂದಲೂ ಕಳವಳಿಸುವ ಬದಲು, ಕನಿಕರವೇ ಆಕೃತಿಯಾಗಿ ಬಂದಿರುವ ದನದೊಡನೆ ಸ್ನೇಹದಿಂದಿರುವುದೇ ಒಳ್ಳೆಯದು ಎನ್ನಿಸುತ್ತೆ ನನಗೆ.

ಹಸುವಿನ ನಡತೆ ಕುತೂಹಲಕಾರಿ. ಅದಕ್ಕೆ ಇಲ್ಲಿ ಹೋಗಬೇಕು, ಹೊತ್ತಾಯಿತು ಎನ್ನುವ ಯೋಚನೆಯಿಲ್ಲ. ಅದಕ್ಕೆ ನಮ್ಮಂತೆ ಕಾಲಕ್ಕೆ ಸರಿಯಾಗಿ ಒಂದುಕಡೆ ಬಂದು ಸೇರದೆ, ತಿಳಿಯಬೇಕಾದ್ದನ್ನು ತಿಳಿಯದೆ, ಕಳವಳಿಸುವ ತಾಪತ್ರಯವಿಲ್ಲ. ಅಟೆಂಡೆನ್ಸ್‌ಗೋಸ್ಕರ ಅವಸರವಾಗಿ ಅತಿಕ್ರಮದಿಂದ ಪ್ರವೇಶಿಸಿ, ಅಧ್ಯಾಪಕರಿಂದ ಅನ್ನಿಸಿಕೊಳ್ಳುವ ಭಾಗ್ಯ ಈ ಹಸುವಿನ ಹಣೆಯಲ್ಲಿ ಬರೆದಿಲ್ಲ. ಒಂದೊಂದು ಕಾಲು ಇಡುವಾಗಲೂ ಈ ಗೋದೇವಿಯು ಭೂದೇವಿಗೆ ನೋವಾಗದಿರಲಿ ಎಂಬಂತೆ ತನ್ನ ಪಾದವನ್ನು ತೂಗಿ ತೂಗಿ ಇಡುವ ಹಾಗೆ ಕಾಣುತ್ತೆ. ಆಃ! ಅದೆಂಥಾ ನಡಿಗೆ! ಒಂದೇ ಗತಿಯಲ್ಲಿ, ಸ್ವಲ್ಪವೂ ಕಾಲ ವ್ಯತ್ಯಾಸವಿಲ್ಲದೆ, ನುರಿತ ಸಂಗೀತಗಾರರನ್ನು ಅಣಕಿಸುವ ಗೊರಸಿನ ಧ್ವನಿ! ತನಿ ನುಡಿಯುವ ಮೃದಂಗದಂತೆ, ಟಾರ್ ರಸ್ತೆಯ ಮೇಲೆ ದನಗಳು ನಡೆಯುವಾಗ ಬರುವ ಧ್ವನಿ ಕಿವಿಗೆ ಇಂಪು, ಮನಸ್ಸಿಗೆ ತಂಪು.

ಮೈಮೇಲೆ ಕೂತ ನೊಣ, ಸೊಳ್ಳೆ, ಮುಳ್ಳು, ಗಿಳ್ಳುಗಳನ್ನು ತನ್ನ ಚರ್ಮದಿಂದಲೇ, ಸಮುದ್ರದ ಅಲೆ ಹಡಗು ದೋಣಿಗಳನ್ನು ಏರಿಸುತ್ತ್ಲಲೂ

ಇಳಿಸುತ್ತಲೂ ಒಯ್ಯುವಂತೆ, ಅಲುಗಾಡಿಸಿ ಹೋಗಲಾಡಿಸುವುದು. ಇದನ್ನು ಕಂಡಾಗಲೆಲ್ಲ 'ದೇವರು ನಮಗೂ ಏಕೆ ಹೀಗೆ ಮಾಡಲಿಲ್ಲ? ' ದೇವರು ಎಷ್ಟು ಪಕ್ಷಪಾತಿ' ಎಂದು ಅನ್ನಿಸುತ್ತದೆ. ನಿಜವಾಗಿ ನೋಡಿದರೆ, ದೇವರು ಪಕ್ಷ ಪಾತಿಯೇ ಹೌದು. ದನಗಳಿಗೆ ಮಾತ್ರ ಚಲಿಸಬಲ್ಲ ಅಗಲ ಅಗಲವಾದ, ಶಬ್ದಗ್ರಾಹಿಗಳು! ನಮಗೋ ಎರಡು ಸಣ್ಣಸಣ್ಣ ಚಕ್ಕಳದ ಚೂರಿನಂತಿರುವ ವಿಕಾರವಾದ ರಂಧ್ರದೊಡನೆ ಕೂಡಿರುವ ನಿಶ್ಚಲವಾದ ಕರ್ಣಗಳು!

ಇನ್ನು ಮೂಗು. ನಮ್ಮಲ್ಲಿ ಒಬ್ಬೊಬ್ಬರ ಮೂಗು ಒಂದೊಂದು ವಿಧ. ಒಂದೊಂದು ಮೂಗು ಆನೆ, ಕುದುರೆ, ಒಂಟೆ, ಗಿಳಿ, ಇತ್ಯಾದಿ ಪ್ರಾಣಿಗಳನ್ನು ಹೋಲುತ್ತವೆ. ಕೆಲವರ ಮೂಗು, ಗವಿಯ ಬಾಗಿಲಿನಂತೆ, ಎಲ್ಲಾ ಕ್ರಿಮಿ ಕೀಟಗಳ ಪ್ರವೇಶಕ್ಕೂ ಅಪ್ಪಣೆ ಕೊಟ್ಟಿರುವಂತಿರುತ್ತವೆ. ಆದರೆ ದನಗಳಲ್ಲಿ ಮಾತ್ರ ಸಾಧಾರಣವಾಗಿ ಒಂದೇ ವಿಧ. ಈ ವಿಕಾರ ಮನುಷ್ಯರಲ್ಲಿ ಮಾತ್ರ ಕಾಣುವುದರಿಂದ, ಮನುಷ್ಯನನ್ನು ನೋಡಿದರೆ ನನಗೆ ಒಂದು ವಿಧವಾದ ಜುಗುಪ್ಸೆ.

ಪ್ರಕೃತಿ ಮನುಷ್ಯನನ್ನು ಇನ್ನೆರಡು ಅಂಶಗಳಲ್ಲಿ ದನದಿಂದ ಬೇರ್ಪಡಿಸಿದೆ. ಅದು ಏನೆಂದರೆ—ದನಕ್ಕೆ ಕೊಂಬು, ಮತ್ತು ಬಾಲ ಎರಡು ಹೆಚ್ಚಾಗಿವೆ. ಅವುಗಳಿಗೆ ಕಷ್ಟಕಾಲದಲ್ಲಿ ಆಯುಧಾನ್ವೇಷಣದ ಕಷ್ಟವಿಲ್ಲ. ನಮಗಾದರೋ, ಬೇರೆ ಹುಡುಕಾಡಬೇಕು. ಅಥವಾ ಹಸ್ತಾಯುಧ ಪ್ರಯೋಗ ಮಾಡಬೇಕು. ನಮ್ಮ ಬಡಜನರ ಮೂಳೆಗಳು ಅಷ್ಟು ಶಕ್ತಿಯುತವಾದುವಲ್ಲ. ಏನೋ ಮಾಡುವುದಕ್ಕೆ ಹೋಗಿ, ಆರು ತಿಂಗಳು ಆಸ್ಪತ್ರೆ ನರ್ಸುಗಳಿಂದ ಸೇವೆ ಸ್ವೀಕರಿಸುವಂತೆ ಆದೀತೆಂಬ ಭಯ. ಅದಕ್ಕೇ, ನಾನು ಕೈ ಆಯುಧವಾಗಿ ಉಪಯೋಗಿಸಲು ಹೆದರಿ ಹಿಂಜರಿಯುತ್ತೇನೆ. ದನಗಳಿಗೆ ಎರಡನೆಯದು ಆ ದಿವ್ಯವಾದ ಬಾಲ. ಕೆಲವಕ್ಕೆ ಹೇರಳವಾಗಿ ಬೆಳೆದ ಕೂದಲಿನ ಗೊಂಚಲು ಅವುಗಳ ಸೌಂದರ್ಯವನ್ನು ಹೆಚ್ಚಿಸುತ್ತದೆ. ಕೆಲವು ವೇಳೆ ಜಡೆ ಹಣೆಯಬೇಕೆಂಬ ಇಚ್ಛೆಯೂ ಉಂಟಾಗುವುದು! ಸನ್ನಿವೇಶ, ಸ್ವಾಭಾವಿಕ ಲಕ್ಷಣಗಳ ಕಡೆಯಿಂದ ಮತ್ತೆ ಸ್ವಾಭಾವಿಕ ಗುಣದ ಕಡೆಗೆ. ವಿಚಾರಲಹರಿಯಲ್ಲಿ ಹೇಳಿದ್ದನ್ನೇ ಮತ್ತೆ ಮತ್ತೆ ಹೇಳುವುದೂ ಉಂಟು. ಹೇಳುವುದು ಉದ್ದೇಶಪೂರ್ವಕವಾಗಿಯೇ ಎನ್ನುವುದನ್ನು ಮರೆಯಬೇಡಿ. ಓದುಗರು ಹಸುವಿನಂತೆ ತಾಳ್ಮೆಯಿಂದಿರಬೇಕು, ಭೂಮಿಯಂತೆ ಅವರಿಗೆ ಕ್ಷಮಾಗುಣವಿರಬೇಕು.

ಕ್ಷಮಾಗುಣ ಎಂದೆ. ಕೂಡಲೆ ಜ್ಞಾಪಕ ಬಂತು. ಬೆಂಗಳೂರಿನ ಬಡ ಜೀವನವೆಲ್ಲ ಗೊಂದಲವೇ. ಎಲ್ಲಿ ನೋಡಿದರೂ ಜನರ ಗಜಿಬಿಜಿ. "ಕ್ಯೂ" ಒಂದು ಹೊಸ ಪದ್ಧತಿ. ಹೊಸದಾದರೂ ಹಳೆಯ ಪದ್ಧತಿಗಳಿಗೆ ವಿರೋಧವಲ್ಲ. ಆದರೆ ವಿರೋಧವಾದವುಗಳ ಗುಂಪೆ ಬೇರೆ. ಅವುಗಳ ಪಟ್ಟಿ ಇಲ್ಲೇಕೆ? ಜೀವನದ ಶುಭ ಅಶುಭ ಕಾರ್ಯಗಳಿಗೆ ಬೇಕಾದ ಪದಾರ್ಥಗಳಿಗೂ "ಕ್ಯೂ", ಮನರಂಜನೆಗೂ "ಕ್ಯೂ". ಎಲ್ಲಕ್ಕೂ ಮುಖ್ಯವಾಗಿ ಓಡಾಡಬೇಕಾದರೂ "ಕ್ಯೂ"ನಿಂದಲೇ ಆಗಬೇಕೋ, ಏನೋ? ಇಂತಹ ಸನ್ನಿವೇಶದಲ್ಲಿ ದಯೆ, ದಾಕ್ಷಿಣ್ಯಗಳಿಲ್ಲದಿದ್ದರೆ ಹೇಗೆ? ಆದರೆ ಇರುವುದಿಲ್ಲ, ಅದು ಖಂಡಿತ. ಒಂದು ಸಲ ಕಾಲೇಜಿಗೆ ಮೆಜೆಸ್ಟಿಕ್ ಮೂಲಕ ಹೋಗಬೇಕು ಅನ್ನಿಸಿತು. ಎಷ್ಟಾದರೂ ಮೆಜೆಸ್ಟಿಕ್ಕಿನ ನಯನ ಮನೋಹರ ನೋಟ ನೋಡಬೇಕೆಂಬ ಇಷ್ಟ ಯಾರಿಗಿರುವುದಿಲ್ಲ! ನನ್ನ ರಣತೇಜಿಯ ಮೇಲೆ ಮೆಜೆಸ್ಟಿಕ್ಕಿಗೆ ಹೊರಟೆ.

ಅಲ್ಲಿನ ನೂಕುನುಗ್ಗಲಲ್ಲಿ, ಎಷ್ಟೆಂದು ಬ್ಯಾಲೆನ್ಸ್ ಮಾಡುವುದು? ಒಂದು ಪಕ್ಕಕ್ಕೆ ವಾಲಬೇಕಾಯಿತು. ಅಷ್ಟರಲ್ಲಿ ನಾನು ಯಾರ ಮೇಲೋ ಒರಗಿದಹಾಗಾಯ್ತು. ಆಗ, ಹಿಂದೆ ದೇವಾಸುರ ಯುದ್ಧದಲ್ಲಿ ಕೈಕೆ ರಥಚಕ್ರಕ್ಕೆ ಭುಜಕೊಟ್ಟು ದಶರಥನನ್ನು ಕಾಪಾಡಿದ ಜ್ಞಾಪಕ ಬಂತು. ತತ್‌ಕ್ಷಣ ಹೆದರಿಕೆಯೂ ಆಯ್ತು; "ಏನ್ರೀ, ಹೀಗೆ ಮೇಲ್ಬೀಳ್ತೀರ?" ಅಂತ ಯಾರಾದರೂ ಕೆನ್ನೆಗೆ ಕೊಟ್ಟಾರೂಂತ. ಸದ್ಯ ನನ್ನ ಆಪತ್ತಿಗೆ ಆದದ್ದು ಸಾಧುಪ್ರಾಣಿ ಆಕಳು. ಈ ಪ್ರಾಣಿಗೆ ಎಷ್ಟು ಸಹನೆ, ಎಷ್ಟು ದಯೆ, ಏನು ಕರುಣೆ! ಪ್ರಾಣೀ ಅಂತ ಅನ್ನಿಸಿತು. ಅದರ ಮೈದಡವಿ ನನ್ನ ಋಣಪ್ರೇಮ ತೋರಿಸಿದೆ.

ಹಾಗೂ ಹೀಗೂ ಕಾಲೇಜ್ ಹೊಕ್ಕದ್ದಾಯಿತು. ಈಚೆ ಗೊಂದಲದಿಂದ ಹೇಗೋ ವಿಮುಕ್ತನಾಗಿ ಬಂದದ್ದಾಯಿತು. ಆದರೆ ಈ ಕಾಲೇಜನ್ನು ಒಂದು ದೊಡ್ಡಿ ಎಂದು ಕರೆಯಬೇಕಾದರೆ ತುಂಬ ವ್ಯಸನವಾಗುತ್ತೆ; ಆದರೆ ಅನಿವಾರ್ಯ. ಆಗ ನನಗೆನ್ನಿಸಿತು, ಕಾಲೇಜು ಜನವೂ ಒಂದು ಬಗೆಯ ದನವೇ ಅಂತ.

ಉಪನ್ಯಾಸಗಳಲ್ಲೂ ಪುಸ್ತಕಗಳಲ್ಲೂ ಸಂಗೀತಗಳಲ್ಲೂ 'ನರಜನುಮ ವತ್ಯಧಿಕ' ಎಂದು ಹೇಳುತ್ತಾರೆ. ಆದರೂ ಹೇಳಿದ ಹಾಗೆ ಎಲ್ಲಿ ಇರುತ್ತದೆ ಲೋಕದಲ್ಲಿ? ನಾಗರಿಕತೆಯಲ್ಲಿ ಮನುಷ್ಯನಿಗಿಂತ ಕೀಳಾದದ್ದು ಇನ್ನೇನೂ ಇಲ್ಲ. ಅದೇನೋ ನನಗೆ ಮನುಷ್ಯನಿಗಿಂತ ದನಗಳ ಮೇಲೇ ಹೆಚ್ಚಿನ ಪ್ರೀತಿ. ನಾಗರಿ

ಕತೆಯ ಅತ್ಯಂತ ಉನ್ನತ ಶಿಖರವೇರಿರುವ ಈ ಪ್ರಾಣಿಗೇಕೆ ದನದ ಚಿಂತೆ? ಎಂದು ನಗಬೇಡಿ. ಎವರೆಸ್ಟ್ ಆರೋಹಣ ವೊನ್ನೆ ತಾನೆ ನಡೆದಿದೆ; ಮನುಷ್ಯನ ಬುದ್ಧಿ ಮಾತ್ರ ಇನ್ನೂ ಮಟ್ಟವಾಗೇ ಇದೆ. ಹೀಗೆ ಹೇಳಿದೆನೆಂದು, ನಗರದ ನಾಗರಿಕತೆಯ ನಭೋಗಾಮಿಗಳಾದವರಿಗೆ ಕೋಪ ಬರಬಹುದು, ಅಥವಾ ನಗು ಬರಬಹುದು. ಕಂಡದ್ದು ಕಂಡ ಹಾಗೆ ಹೇಳಿದರೆ ಕೆಂಡದಂಥ ಕೋಪವೇಕೆ? ಈ ಕೋಪ ತಾಪ ದುಃಖ ಇತ್ಯಾದಿಗಳು ಮನುಷ್ಯ ಜನ್ಮಕ್ಕೆ ಅಂಟಿಬಂದಿವೆ, ಕರ್ಣನ ಕವಚದ ಹಾಗೆ. ಆದರೆ ಆ ಕವಚದ ಮಹತ್ತ್ವ ಬೇರೆ, ಈ ಕವಚದ ಪ್ರಭಾವ ಬೇರೆ. ಆದ್ದರಿಂದ ಮನುಷ್ಯರ ನಾಗರಿಕತೆಯ ಅನಾಗರಿಕತೆಗಿಂತ ದನಗಳ ಅನಾಗರಿಕತೆಯ ನಾಗರಿಕತೆಯೇ ಮೇಲು ಎಂದು ನನಗೆ ಎನ್ನಿಸುತ್ತದೆ. ತಮ್ಮ ಅಭಿಪ್ರಾಯ ಹೇಗೋ?

—ಡಿ. ಎ. ವೇಣುಗೋಪಾಲರಾವ್.

## ಅಕ್ಷರ ವಿದ್ಯೆ: ಕೈ ಬಾಯಿ

ಬರೆಯದ ಕೈ ಬಂಧುಗಳಂ |
ಪೊರೆಯದ ಕೈ ಸುತರನೆತ್ತಿ ಕೊಂಡಾಡದ ಕೈ ||
ಕರೆದು ಬುಧರ್ಗೀಯದ ಕೈ |
ಮರಗೈ ಮರುಳ್ಗೈಗಳಂತೆ ಚೂಡಾರತ್ನಾ ||

ಓದದ ಬಾಯಮೃತಾನ್ನವ |
ಮೋದದ ಬಾಯ್ ಸಜ್ಜನರ್ಕಳಂ ಪ್ರಿಯದಿಂದಂ ||
ಆದರಿಸದ ಬಾಯದು ತಾಂ |
ಮೇದಿನಿಯೊಳ್ ಬಿಲದ ಬಾಯೆ ಚೂಡಾರತ್ನಾ ||

ಬರೆವುದು ವಾಚಿಪುದಲಸದೆ |
ಪರಿಚಾರಿಪುದಲ್ಲಿಗಲ್ಲಿ ಬಲ್ಲನಿಬರೊಳಂ ||
ಸರಸಪ್ರಸಂಗಗೆಯ್ಯಲು |
ಸರಸಿಜಭವರಾಣಿಯೊಲಿಯದೇಂ ಮಾಣ್ದಪಳೇ |

# ಇದು ಕಿವಿಗೆ ಇಂಪು

'ಇದು' ಎಂದರೆ ಯಾವುದು? 'ಕಿವಿಗೆ' ಎಂದರೆ ಯಾರ? 'ಇಂಪು' ಎಂದರೆ ಯಾವಾಗ? "In the garden the voice of the insect soothes; in the bed-room it irritates" ಎಂದು Robert Lynd ಹೇಳಿರುವುದನ್ನು ಜ್ಞಾಪಿಸಿಕೊಂಡರೆ—ಒಬ್ಬರಿಗೆ ಒಂದು ಸಮಯದಲ್ಲಿ ಇಂಪಾದದ್ದು ಇನ್ನೊಬ್ಬರಿಗೆ ಮತ್ತೊಂದು ಕಾಲದಲ್ಲಿ ಕರ್ಣಕಠೋರವಾಗಬಹುದು; ಒಬ್ಬರಿಗೆ ಇಷ್ಟವಾದದ್ದು ಮತ್ತೊಬ್ಬರಿಗೆ ಅನಿಷ್ಟವಾಗಬಹುದು.

ಕಿವಿಗೆ ಇಂಪಾದದ್ದರಲ್ಲಿ ಮೊತ್ತಮೊದಲನೆಯ ಸ್ಥಾನ ಸಂಗೀತಕ್ಕೆ. ಸಂಗೀತ ಎಂಥವರ ಮನಸ್ಸನ್ನಾದರೂ ಸೆಳೆಯಬಲ್ಲುದು. "ಸಂಗೀತ ಬಾರದವ, ವೈದ್ಯ ಬಾರದವ ಲೋಕದಲ್ಲೇ ಇಲ್ಲ" ಎಂದು ಗಾದೆಯೇ ಇದೆ. ಗಾರ್ದಭ ಸ್ವರವನ್ನೂ ನಾಚಿಸುವಂಥ ಕಂಠವಿದ್ದರೂ, ಸಂಗೀತದ ಗಂಧವೇ ಇಲ್ಲದಿದ್ದರೂ, 'ಆಸ್ಥಾನ'ದಲ್ಲಿ ಅಲ್ಲದಿದ್ದರೆ, 'ಸ್ವಸ್ಥಾನ'ದಲ್ಲಾದರೂ ಪಂಡಿತರಂತೆ ಗುಯ ಗುಟ್ಟುತ್ತಾರೆ. ಎಲ್ಲಾದರೂ ಸಂಗೀತಕಛೇರಿಗೆ ಹೋದರೆ, ಸಂಗೀತಗಾರರ ಎದುರಿಗೇ ಕುಳಿತು, ಅವರಿಗಿಂತ ಹೆಚ್ಚಾಗಿ ತಲೆಯಲ್ಲಾಡಿಸುತ್ತ ತಪ್ಪುತಪ್ಪಾಗಿ ತಾಳಹಾಕಿ, ಮೃದಂಗದವನನ್ನೇ ಬೆಪ್ಪುಮಾಡಿಬಿಡುತ್ತಾರೆ. ಇಂಥ ಕರ್ಣ ರಸಾಯನವನ್ನು ಆಸ್ವಾದಿಸುವ ಜನಗಳಲ್ಲೂ ಭೇದಭಾವವಿಲ್ಲದೆ ಇಲ್ಲ. ಸಿನೆಮಾ ಸಂಗೀತಕ್ಕೆ ಮರುಳಾಗಿರುವವರು ಶಾಸ್ತ್ರೀಯ ಸಂಗೀತ ಕೇಳುವುದಕ್ಕೆ ಹೋದರು ಎಂದು ಇಟ್ಟುಕೊಳ್ಳಿ. ಆಲಾಪನೆ ಅವರಿಗೆ ಪ್ರಲಾಪನೆಯಾಗಿ ಕೇಳಿಬರುತ್ತೆ. ಎರಡು ನಿಮಿಷ ಆಗುವುದರೊಳಗಾಗಿ ತಲೆ ಕೈಯಲ್ಲಿ ಹಿಡಿದು ಕೊಂಡು ಎದ್ದುಬರುತ್ತಾರೆ. ಸಭಿಕರೆಲ್ಲಾ ತಲೆದೂಗಿ 'ಭಲೆ ಭಲೆ' ಎಂಬುದನ್ನು ಕೇಳಿದರೂ ಅವರಿಗೆ ಆ ಸಂಗೀತ ಕಿವಿಗೆ ಇಂಪಾಗಿರುವುದಿಲ್ಲ. ಅಲ್ಲಿ ಕುಳಿತಿದ್ದ ವರೆಲ್ಲಾ,—ತಲೆ ಆಡಿಸಿದವರೆಲ್ಲಾ, ತಾಳ ಹಾಕಿದವರೆಲ್ಲಾ,—ಯಾವುದಾದರೂ ಒಂದು ಸ್ಥಳಕ್ಕೆ—ಸಿನೆಮಾ ಸಂಗೀತವೋ, ಉತ್ತರಾದಿಯ ಸಂಗೀತವೋ ನಡೆಯುತ್ತಿದ್ದೆಡೆಗೆ ಹೋದರೆ ಏನೆನ್ನುತ್ತಾರೆ ಗೊತ್ತೆ? 'ಇದೇನಯ್ಯಾ ಇದು ಗೋಳು!' ಎಂದು ಅಲ್ಲಿ ನಿಲ್ಲದೆ ಹೊರಟುಬಿಡುತ್ತಾರೆ. ಆದರೆ ಅಲ್ಲಿ ನೆರೆದಿರುವ

ಜನ ಕರ್ಣಾಟಕ ಸಂಗೀತ ನಡೆಯುತ್ತಿದ್ದ ಸ್ಥಳದಲ್ಲಿದ್ದ ಜನರಿಗೆ ಯಾವ ಅಂಶದಲ್ಲಿಯೂ ಕಡಮೆಯಿರುವುದಿಲ್ಲ. ಕಾರಣ : ಅದು ಅವರ ಕಿವಿಗೆ ಇಂಪು, ಇದು ಇವರ ಕಿವಿಗೆ ಇಂಪು.

ಇನ್ನೂ ಸ್ವಲ್ಪ ಮುಂದೆ ಹೋದರೆ, ಈ ಸಂಗೀತದ ಇನಿದನ್ನು ಆಸ್ವಾದಿಸುವವರಲ್ಲಿ ಪ್ರಾಂತೀಯ ಪ್ರೇಮಗಳ ಜೊತೆಗೆ ರಾಷ್ಟ್ರೀಯಾಭಿಮಾನವೂ ಇದ್ದ ಹಾಗೆ ತೋರಿಬರುತ್ತದೆ. ನಾವು—ಭಾರತೀಯರು—ಆಂಗ್ಲರ ಸಂಗೀತವನ್ನು ಮೆಚ್ಚುತ್ತೇವೆಯೆ? ಅದನ್ನು ಕೇಳಿದವರು ಚೆನ್ನಾಗಿದೆ ಎಂದಾರೆ? ಬಹಳ ಅಪರೂಪ! ಎಲ್ಲೋ ಒಬ್ಬಿಬ್ಬರು ಇರಬಹುದು—ದಿವಂಗತ ಕೈಲಾಸಂ ಅಂಥವರು. ಅವರು ಆ ಸಂಗೀತಕ್ಕೂ ತಲೆದೂಗುತ್ತಿದ್ದರು, ಈ ಸಂಗೀತಕ್ಕೂ ತಾಳ ಹಾಕುತ್ತಿದ್ದರು. ಕಾರಣ—'ತುಂಬಿದ ಕೊಡ'ದಂತೆ ಅವರು; ಎರಡು ತರಹ ಸಂಗೀತಗಳನ್ನೂ ಬಲ್ಲವರು. ಅದೇ ಈಗಿನ ಕೆಲವರು ವಿದ್ವಾಂಸರು ನೋಡಿ: ಅವರಿಗೆ ಹಾಡಲಿಕ್ಕೆ ಬಂದರೆ ಒಂದು ವಾದ್ಯವನ್ನು ಶ್ರುತಿ ಮಾಡಲು ಬರುವುದಿಲ್ಲ. ವಾದ್ಯಗಾರರಾಗಿದ್ದರೆ "ತರಾನಾ" ಬರುವುದಿಲ್ಲ. ಇಂಥ ಮಹನೀಯರಿಗೆ ತಮ್ಮ ಹಾಡೇ ತಮಗೆ ಇಂಪು. ಸಾವಿರಾರು ಜನರನ್ನು ಮುಗ್ಧಗೊಳಿಸಿದ ಮತ್ತೊಬ್ಬ ವಿದ್ವಾಂಸರ ಸಂಗೀತವನ್ನು ಕೇಳಿದರೆ "ಹ್ಞ! ಅವನಿಗೇನು ಬರುತ್ತೆ!" ಎನ್ನುತ್ತಾರೆ.

ಸಂಗೀತಕ್ಕೆ ಬಹುಮಟ್ಟಿಗೆ ಸಂಬಂಧ ಹೊಂದಿರುವ ಸಾಹಿತ್ಯದ ಕಡೆಗೆ ಹೋಗೋಣ. ಅದರಲ್ಲೂ ಪದ್ಯವನ್ನು ಓದುವ ಕವಿಯ ಕಡೆ ತಿರುಗೋಣ. 'ಓದುವ' ಎಂದರೆ 'ತಾನು ಬರೆದುದನ್ನು ತಾನೇ ಓದುವ' ಎಂದು. ಕವಿಗಳಲ್ಲಿ ಹದಿನೈದಾಣೆ ಭಾಗ ಒಡಕಲು ಕಂಠದವರೇ ಎನ್ನಬಹುದು. ಅದು ಅವರಿಗೆ ಶಾಪ ಎನ್ನುತ್ತಾರೆ. ಸಂಗೀತಕ್ಕೂ ಸಾಹಿತ್ಯಕ್ಕೂ ದ್ವೇಷ ಎನ್ನುತ್ತಾರೆ. ಯಾರು ಏನೇ ಅಂದುಕೊಳ್ಳಲಿ, ಅದು ನಮ್ಮ ಕಿವಿಗೆ ಇಂಪಾದುದಲ್ಲ ಬಿಡಿ. ಕವಿ ತನ್ನ ಪದ್ಯಗಳನ್ನು ತಾನೇ ವಾಚನಮಾಡತೊಡಗಿದ ಎಂದರೆ, ಆತನ ಕಂಠದ ಮಾಧುರ್ಯದ ಕಡೆಗೆ ಯಾರ ಮನಸ್ಸೂ ಹೋಗುವುದಿಲ್ಲ. ಆದರೆ ಎಲ್ಲರೂ ಆನಂದಪರವಶರಾಗುತ್ತಾರೆ. ಕವಿಯೊಡನೆ ಅವನ ಆವೇಶದಲ್ಲಿ ತಾವೂ ಮೈಮರೆತು, ಪುಲಕಿತರಾಗಿ, ರಸಾಸ್ವಾದನೆ ಮಾಡುತ್ತಾರೆ. ಈ 'ರಸಾಸ್ವಾದನೆ' ಯಿಂದಲೇ ಶ್ರಾವಕರ ಕಿವಿಗಳಿಗೆ ಇಂಪು—ಆ ಒಡಕು ಕಂಠದಿಂದಲ್ಲ.

"ಪರೀಕ್ಷೆಯ ಸಮಯ ಬಂದಿತು" ಎಂಬುದು ಎಷ್ಟು ಜನದ ಕಿವಿಗೆ ಇಂಪು? ಉಹು. ಇಲ್ಲ. ಅದೇ ದಿವಸ "ಪರೀಕ್ಷೆ ಮುಂದಕ್ಕೆ ಹಾಕಿದರು" ಎಂದು ಪ್ರಚುರವಾಯಿತು ಎಂದುಕೊಳ್ಳಿ. ಅದು ಎಲ್ಲರ ಕಿವಿಗೂ ಇಂಪು. ಅದನ್ನು ಎಷ್ಟು ಕೇಳಿದರೆ ತಾನೆ ಮನಸ್ಸಿಗೆ ತೃಪ್ತಿಯಾದೀತು? ಎಷ್ಟುಸಲ ಹೇಳಿದರೆ ತೃಪ್ತಿಯಾದೀತು? ಅದೇ ಬೇರೆ ಯಾವುದಾದರೂ ವಿಷಯವನ್ನು ಅಪ್ಪಿ ತಪ್ಪಿ ಒಂದು ಸಲ ಹೇಳುವುದು ಎರಡು ಸಲ ಹೇಳಿದರೆ, ತತ್‌ಕ್ಷಣ "ಹೇಳಿದ್ದೇ ಹೇಳ್ತಾನೆ ದಾಸಯ್ಯ" ಎಂದು ನಾಮಕರಣವಾಗಿಹೋಗುತ್ತೆ. ಆದರೆ ಇದನ್ನು ಎಷ್ಟುಸಲ ಹೇಳಿದರೂ ಬಾಯಿ ಕಿವಿಯ ವರೆಗೂ ಹಿಗ್ಗುತ್ತೆ. ಕಿವಿ ಮೈಯಗಲ ವಾಗುತ್ತೆ. ಪ್ರತಿಸಲ ಕೇಳುವಾಗಲೂ ಒಂದು ನವ್ಯತೆ, ಇನಿದು ಈ ಮಾತಿನಲ್ಲಿ ಕಂಡುಬರುತ್ತೆ. ಈ ಪದಗುಂಫನ ಕವಿ ಬರೆದುದಲ್ಲ, ಕವಿ ಹಾಡಿದುದಲ್ಲ, ಗಾಯಕನ ರಾಗಾಲಾಪನೆಗಳೊಡನೆ ಕೇಳಿ ಬಂದುದಲ್ಲ. ಆದರೂ . . . !

ಪರೀಕ್ಷೆ ಮುಗಿದು ರಿಸಲ್ಟ್ ಬಂದಿತು ಎನ್ನಿ. 'ರಿಸಲ್ಟ್ ಬಂದಿತು' ಎಂಬುದು ಎಷ್ಟು ಜನರಿಗೆ ಇಂಪು? ಪಾಸಾಗುವ ಭರವಸೆಯಿದ್ದವರಿಗೆ ಮಾತ್ರ—ಇಂಪು. ಪಾಸಾದವರ ಕೋಲಾಹಲ ಅವರ ತಂದೆತಾಯಿಗಳಿಗೆ ಇಂಪು. ಅವರಿಂದ ಅನೇಕರಿಗೆ ದೋಸೆ ಕಾಫಿಗಳ ತಂಪು. ಫೇಲಾದವರ ಗತಿ? ಅಳುವವರು ಎಷ್ಟು ಜನ? ಮನೆಬಿಟ್ಟು ಓಡುವವರೆಷ್ಟು ಜನ? ಆತ್ಮ ಹತ್ಯೆಗೆ ಹೇಸದವರೆಷ್ಟು ಮಂದಿ? ಹೀಗಿದ್ದರೂ ಇನ್ನೊಬ್ಬರು ಫೇಲಾದುದನ್ನು ಕೇಳಿ ಸಂತೋಷದಿಂದ ನಗುವವರೂ ಕೆಲವರು ಇರುತ್ತಾರೆ. ಎಂದಿನದೋ ಸೇಡನ್ನು ಇಂದು—ಅದೃಷ್ಟವಶಾತ್ ಅಥವಾ ಸ್ವಯಂಕೃತಾಪರಾಧದಿಂದಲೇ ಇರಲಿ—ಫೇಲಾದುದಕ್ಕೆ, ತೀರಿಸಿಕೊಂಡೆವೆಂದು ನಗುತ್ತಾರೆ. ಪಾಸಾದವರು ನಕ್ಕರು, ಅವರ ಬಳಗ ನಕ್ಕಿತು,—ಅದು ಅವರಿಗೆ ಇಂಪು. ಫೇಲಾದವರ ಶತ್ರುಗಳೂ ನಕ್ಕರು. ಈ "ನಗೆ ಇನಿದು—ಪಗೆಗಳನ್ ನಗುವ ನಗೆ."

"ಮಕ್ಕಳಿದ್ದ ಮನೆ ನಂದಗೋಕುಲ." ಮನೆ ಎಂದಮೇಲೆ ಮಕ್ಕಳಿದ್ದೇ ಇರಬೇಕು. ಆ ಮಕ್ಕಳ ಆಟ ಪಾಟಕ್ಕೂ ಸ್ವರ್ಗಕ್ಕೂ ಚೋಟೀ ಚೋಟು. ಅವರು ಆಡುವಾಗ ಆಕಾಶ ಸೀಳುವಂತೆ ಕೂಗಿದರೂ ಅದು ಕಿವಿಗೆ ಇನಿದೇ. ಮಾತೇ ಬಾರದೆ—ತೊದಲು ಮಾತಾಡಿ ನಕ್ಕರೆ, ಅದೂ ಇನಿದೇ? ಕೇಕೆ ಹಾಕಿದರೂ ಇನಿದೇ. ಒಂದೊಂದು ಸಲ ಅತ್ತರೂ ಇನಿದೇ!

ಆದರೆ ಅದೇ ಮಗು ಇಲ್ಲದ್ದನ್ನು ಬೇಕು ಎಂದು ಹಟಮಾಡಿತು ಎನ್ನಿ, ರಾತ್ರಿ ನಿದ್ದೆ ಕೆಡಿಸಿತು ಎನ್ನಿ—ಆಗ ಎಂಥ ವಾತ್ಸಲ್ಯವುಳ್ಳ ತಂದೆತಾಯಿಗಳಿಗೂ ಸಹನೆ ಮೀರದಿರಲಾರದು. ಏಟು ಬೀಳದಿರಲಾರದು. ಆಗ ಗಂಡ ಹೊಡೆದರೆ ಹೆಂಡತಿ, ಹೆಂಡತಿ ಹೊಡೆದರೆ ಗಂಡ, ಮಗುವಿನ ಪರ ವಹಿಸಿ ವಾದ ಮಾಡುವುದು—ಆ ಗಂಡ ಹೆಂಡಿರ ವಾಗ್ಯುದ್ಧ—ಕೇಳುವವರ ಕಿವಿಗೆ ಇಂಪು.

ಎಲ್ಲ ವಿದ್ಯಾರ್ಥಿಗಳಿಗೂ ಸರ್ವಸಾಮಾನ್ಯವಾದ ಇಂಪು ನುಡಿಯೆಂದರೆ —ಶಾಲೆಯಿಲ್ಲ, ಎಂಬುದು. ಕಾಲೇಜಿಗೆ ಬಂದಮೇಲಂತೂ ಇದರ ಇಂಪು—ಇದರಿಂದ ಆಗುವ ತಂಪು—ಹೇಳತೀರದು. ಬೇಸಿಗೆ ರಜದ ಮೂರು ತಿಂಗಳೂ ಮಧ್ಯಾಹ್ನ ಊಟವಾದ ಮೇಲೆ ನಿದ್ರಾದೇವಿಗೆ ಶರಣರಾಗುವುದು ಅಭ್ಯಾಸವಾಗಿಬಿಟ್ಟಿರುತ್ತದೆ. ಇದ್ದಕ್ಕಿದ್ದಹಾಗೆ ಸಿಡಿಲು ಬಿದ್ದಂತೆ (ಬಿದ್ದದ್ದರಿಂದಲ್ಲ!) ಕಾಲೇಜು ಬಾಗಿಲು ತೆರೆಯಲ್ಪಡುತ್ತದೆ. (ತೆರೆಯುತ್ತಾರೆ ಅಲ್ಲ!) ಕಾಲೇಜಿಗೆ ಹೋಗಿ ಕುಳಿತರೆ, ನಾವು ಬೇಡದಿದ್ದರೂ, ಕೊಠಡಿಯಲ್ಲಿ ಉಪಾಧ್ಯಾಯರು ಎಷ್ಟೇ ಕಠಿಣವಾಗಿದ್ದರೂ, ಹೊತ್ತು ಮೀರಿದ ಬಳಿಕ ಯಾರನ್ನೂ ಬರಗೊಡಿಸದವರಾದರೂ, ಈ ನಿದ್ರಾದೇವಿಯನ್ನು ಬಾಗಿಲಲ್ಲೇ ನಿಲ್ಲಿಸಲು "ನಾನು ಅಪ್ಪಣೆ ಕೊಡಲಾರೆ" ಎನ್ನಲು ಅಸಮರ್ಥರಾಗುತ್ತಾರೆ. ಯಾವಾಗಲೋ ನಿದ್ರಾದೇವಿ ಪ್ರವೇಶಿಸಿ ವಿದ್ಯಾರ್ಥಿಗಳ ಮೇಲೆ ಆವಾಹನೆಯಾಗಿಬಿಡುತ್ತಾಳೆ. ಅದನ್ನು ಕಂಡು ಉಪಾಧ್ಯಾಯರೇನಾದರೂ ಕುಪಿತರಾದರೆ ಅವರ ಮೇಲೂ ಆವಾಹನೆಯಾಗಿಬಿಡುತ್ತಾಳೆ. ಅವರೂ ಒಮ್ಮೊಮ್ಮೆ ಆಕಳಿಸಿ ಚಿಟಿಕೆ ಹಾಕುವಾಗ ಕೈಯಲ್ಲಿದ್ದ 'ಸೀಮೆಸುಣ್ಣ'ದ ಬಣ್ಣವನ್ನು ತುಟಿಗೆ ಹಚ್ಚಿಕೊಂಡು, ಸಿಡಿಗುಟ್ಟುತ್ತಾ "ಈಗ ನಿಮ್ಮ ತರಗತಿಯನ್ನು ತೆಗೆದುಕೊಳ್ಳುವುದಿಲ್ಲ" ಎಂದು ಹೊರಡುತ್ತಾರೆ. ಆಹ! ಅವರ ಆ ಮಾತಿನ ಮಾಧುರ್ಯ ಎಷ್ಟು ಇನಿದು? ಎಲ್ಲರ ಕಿವಿಗೂ ಇಂಪು—ಆ ಸಂದರ್ಭದಲ್ಲಿ ಮಾತ್ರ. ಆದರೆ ಅದೇ ವಿದ್ಯಾರ್ಥಿಗಳು 'ಸೀನಿಯರ್'ಗೆ ಬಂದರೂ ಎನ್ನಿ. ಆಗ ಪರೀಕ್ಷೆ ಮುಂದಕ್ಕೆ ಹೋದ ಮಾತು ಬಹಳ ಇಂಪು.

ನಾನು ಆರಂಭದಲ್ಲೇ ಹೇಳಿದ ಹಾಗೆ—'ಇದು' ಎಂದರೆ ಯಾವುದು? 'ಕಿವಿಗೆ' ಎಂದರೆ 'ಯಾರ?' 'ಇಂಪು' ಎಂದರೆ ಯಾವ ಸಂದರ್ಭದಲ್ಲಿ? ಇದನ್ನು ಒಂದು ಸಣ್ಣ ಎಸ್ಸೆಯಲ್ಲಿ ಹೇಳಿ ಮುಗಿಸುವುದು ಕಷ್ಟ.

**—ಬಿ. ಟಿ. ಅಶ್ವತ್ಥನಾರಾಯಣರಾವ್.**

# ಟೋಪಿ

ಟೋಪಿ ಮಾನವನ ಮಂಡೆಯನ್ನು ಮುಚ್ಚುವ ಒಂದು ಸಾಧನ. ಇದಕ್ಕೆ ಸಲ್ಲಬೇಕಾದ ಗೌರವ ಮನುಷ್ಯನ ತಲೆಗೆ ಸಲ್ಲಬೇಕಾದಷ್ಟೆ. ಅಷ್ಟಿಲ್ಲದೆ ಅದು ನಮ್ಮ ತಲೆಯನ್ನೇರುವಷ್ಟು ಶಕ್ತಿಯುಳ್ಳದ್ದೇ? ಆದರೆ ಕಾರಣಾಂತರದಿಂದ ಇಂದು ಅದಕ್ಕೆ ಸಲ್ಲಬೇಕಾದ ಗೌರವ ಸಲ್ಲುತ್ತಿಲ್ಲ. ಇದಕ್ಕೆ ಮಾನವನ ಮೂಢತ್ವ ಕಾರಣವೇ ಹೊರತು ಟೋಪಿಯ ಗೌರವ, ಘನತೆಗಳು ಇಳಿದಿವೆಯೆಂದಲ್ಲ. ಏನೇ ಇರಲಿ, ಟೋಪಿಯನ್ನು ಮತ್ತೆ ತನ್ನ ಹಿಂದಿನ ಗೌರವಯುತವಾದ ಸ್ಥಾನಕ್ಕೆ ತಂದಿರಿಸಬೇಕಾದುದು ನಮ್ಮೆಲ್ಲರ ಮತ್ತು ಮುಂದಿನ ಪೀಳಿಗೆಯ ಕರ್ತವ್ಯವಾಗಿದೆ.

ಟೋಪಿ ಇತ್ತೀಚೆಗೆ ಜನ್ಮ ತಾಳಿದುದೆಂದು ಹಲವರು ಅಭಿಪ್ರಾಯ ಪಟ್ಟಿರುತ್ತಾರೆ. ಆದರದು ಸುಳ್ಳು. ಅದರ ಅಭ್ಯುದಯ ರಾಮಾಯಣ, ಮಹಾ ಭಾರತಗಳ ಕಾಲದಲ್ಲೇ ಆಗಿತ್ತು. ಅಂದಮೇಲೆ ಅದು ಜನ್ಮತಾಳಿ ಎಷ್ಟು ಶತ ಮಾನಗಳಾಗಿರಬಹುದು? ಹಾಗಿದ್ದಲ್ಲಿ ರಾಮ, ರಾವಣ, ಕಂಸ, ಕರ್ಣರೆಲ್ಲಾ ಟೋಪಿ ಧರಿಸುತ್ತಿದ್ದರೆ ಎನ್ನುವ ಪ್ರಶ್ನೆ ಏಳಬಹುದು. ಆದರೆ ಕಿರೀಟಗಳೂ ಒಂದು ರೀತಿಯ ಟೋಪಿಗಳೇ ಎಂದು ತಿಳಿದರೆ ಪ್ರಶ್ನೆಗೆ ಉತ್ತರ ಅಷ್ಟೇನು ಕಠಿಣವಾಗಿರುವಂತೆ ತೋರುವುದಿಲ್ಲ. ಕಿರೀಟಗಳೆಲ್ಲಾ ಟೋಪಿಗಳೇ! ಆದರೆ ರಾಜರು ಅವನ್ನು ಧರಿಸುತ್ತಿದ್ದರಾದುದರಿಂದ ಅದಕ್ಕೆ ಬೆಲೆ ಹೆಚ್ಚಿ, ತಾನು ಟೋಪಿಯೇ ಅಲ್ಲವೆಂದು ಹೇಳಿಕೊಳ್ಳುವಂತಾಯಿತು. ಹೊರನೋಟಕ್ಕೆ ಅದು ಟೋಪಿಯಲ್ಲ, ಕಿರೀಟವೇ ಎಂದು ತೋರುತ್ತದೆ; ಆದರೆ ಅದು ಬರಿಯ ಡೌಲು. ಆಗಿನ ರಾಜರು ತಮ್ಮ ಟೋಪಿಗಳು ಇತರ ಸಾಮಾನ್ಯ ಜನರ ಟೋಪಿಗಳಂತಿರ ದಿರಲೆಂದು ಅದನ್ನು ಬೆಳ್ಳಿ, ಬಂಗಾರದಿಂದ ಮಾಡಿಸಿ, ವಜ್ರ, ಹವಳ, ಕೆಂಪು ಗಳಿಂದ ಅಲಂಕರಿಸಿ, ಅದರ ನಿಜ ರೂಪವನ್ನು ಮುಚ್ಚಿದರು. ತನಗಾದ ಅಲಂಕಾರವನ್ನು ನೋಡಿ ಮೆಚ್ಚಿದ ಟೋಪಿ, ಅಹಂಕಾರದಿಂದ ತಾನು ಟೋಪಿಯೇ ಎಂಬುದನ್ನು ಮರೆತು, ಮೆರೆಯಿತು. ಜನರಿಗೆ ಅದು ಬರಿಯ ಟೋಪಿ ಎಂದೆನ್ನುವ ಧೈರ್ಯವಿಲ್ಲ; ಕಾರಣ, ಅದು ರಾಜರ ಶಿರಸ್ಸನ್ನಲಂಕರಿಸಿದೆ ಯೆಂದು! ಹೀಗಾಗಿ, ಕಿರೀಟಗಳು ಟೋಪಿಗಳಲ್ಲವೆಂದು ಹೇಳುವಹಾಗಾಯಿತು.

ವಿಜ್ಞಾನ ಮುಂದೆ ಸಾಗಿದಂತೆಲ್ಲ ನಮ್ಮ ಜ್ಞಾನ ಅಜ್ಞಾನವಾಗುತ್ತ ದೆಂದು ತೋರುತ್ತದೆ! ನಮ್ಮ ಪೂರ್ವಿಕರು ಧರಿಸುತ್ತಿದ್ದ ಟೋಪಿಯನ್ನು ನಾವೆಲ್ಲ ಅಲಕ್ಷಿಸಿ, ತ್ಯಜಿಸಿದೆವು. ತ್ಯಜಿಸಿದೆವೇ ಹೊರತು ತ್ಯಾಗ ಮಾಡಲಿಲ್ಲ. ಪೂರ್ವಿಕ ರನ್ನು ಮರೆತು ಪಾಶ್ಚಿಮಾತ್ಯರ 'ಪರಂಗಿಟೋಪಿ'ಯನ್ನು ಮೆಚ್ಚಿ, ಅದನ್ನು ಧರಿಸಲು ಪ್ರಾರಂಭಿಸಿದೆವು. 'ಪರಂಗಿಟೋಪಿ' ಪರಂಗಿಯವರೊಡನೆಯೇ ನಮ್ಮ ದೇಶವನ್ನು ಹೊಕ್ಕು, ಕಡೆಗೆ ದೇಶದಲ್ಲೆಲ್ಲಾ ಹರಿದಾಡತೊಡಗಿತು. ಅದನ್ನು ಧರಿಸುತ್ತಿದ್ದವರೆಲ್ಲಾ ಆಗ ರಾಜ್ಯವಾಳುತ್ತಿದ್ದ ಅವರನ್ನು ಮೆಚ್ಚಿಸುವು ದಕ್ಕಾಗಿಯೇ. ಅವರನ್ನು ಮೆಚ್ಚಿಸುವಿಕೆಯಲ್ಲಿ ಸ್ವಾರ್ಥ ಇರುತ್ತಿರಲಿಲ್ಲವೆಂದು ಹೇಳುವ ಧೈರ್ಯ ಯಾರಿಗುಂಟು? 'ಪರಂಗಿಟೋಪಿ'ಯೂ ಒಂದು ವಿಧದಲ್ಲಿ ಟೋಪಿಯೇ. ಬಣ್ಣ, ರೀತಿಗಳಲ್ಲಿ ವಿವಿಧತೆಯುಂಟೇ ಹೊರತು ಅದರ ಕಾರ್ಯ, ಕುಲಗಳಲ್ಲಿಲ್ಲ. ಮೇಲಾಗಿ, 'ಪರಂಗಿಟೋಪಿ'ಯ ಬೆಲೆ ನಮ್ಮ ಟೋಪಿಯ ಬೆಲೆಗಿಂತ ಹೆಚ್ಚು. ಹೆಚ್ಚುಬೆಲೆಯ ಟೋಪಿ ಹಾಕಲಿಚ್ಛಿಸಿದರೇ ವಿನಾ ಬುದ್ಧಿಯ ಮಟ್ಟ ಹೆಚ್ಚಿಸಿಕೊಳ್ಳಲಿಚ್ಛಿಸಲಿಲ್ಲ. ವೇಷ ಭೂಷಣಗಳಲ್ಲಿ ಪರಂಗಿಯವರನ್ನು ಅನುಸರಿಸಿದರು; ಅವರ ಧೈರ್ಯ, ಸ್ಥೈರ್ಯಗಳಲ್ಲಲ್ಲ. ಒಟ್ಟನಲ್ಲಿ, 'ಪರಂಗಿಟೋಪಿ' ಧರಿಸಿದುದರಿಂದ ವೇಷ ಭೂಷಣಗಳಿಗೆ ಕಳೆ ಕಟ್ಟಿತೇ ಹೊರತು ಬುದ್ಧಿ, ವಿವೇಕ, ವಿಚಕ್ಷಣೆ, ಇತ್ಯಾದಿಗಳು ಪ್ರಕಾಶಿತ ವಾಗಲಿಲ್ಲ.

ಟೋಪಿಗೆ ಸಿಗುವ ಗೌರವ ಸಂಪ್ರದಾಯಬದ್ಧವಾದುದು. ನಮಗೆ ಸಿಗುವ ಗೌರವದಿಂದ ನಮ್ಮ ತಲೆ ತಿರುಗಬಹುದು. ಆದರೆ ಟೋಪಿಯ ತಲೆ ತಿರುಗು ವುದು ಅಸಾಧ್ಯ. ಕಾರಣ, ಅದು ತನ್ನ ಬುದ್ಧಿಯನ್ನು ಹರಿಯಗೊಡುವುದಿಲ್ಲ. ಅದರ ಮನಸ್ಸು ಚಂಚಲವಲ್ಲ. ಆತ್ಮಸಂಯಮದಲ್ಲಿ ಎತ್ತಿದ ಕೈ, ಅದು. ಇಂತಹ ಟೋಪಿಯನ್ನು ಧರಿಸುವುದರ ಮರ್ಮ ಧರಿಸುವವನ ಮನಸ್ಸಿನ ಚಂಚಲತೆ ಯನ್ನೂ ಹೋಗಲಾಡಿಸಲೆಂದಿರಬಹುದೆ? ಅದೇನು ಕಾರಣದಿಂದಲೋ ಏನೋ ಅದಕ್ಕೆ ಗೌರವ ಕೊಟ್ಟುಕೊಂಡು ಬಂದಿರುವವರೆಲ್ಲಾ ನಮ್ಮವರೆ. ಅದರಿಂದಾಗಿ ಅದಕ್ಕೆ ಗೌರವ ಕೊಟ್ಟವರಿಗೆ ಬುದ್ಧಿ ಇಲ್ಲವೆಂದೆನ್ನುವಹಾಗಿಲ್ಲ. ಈಗ ನಮ್ಮ ಸರದಿ. ಇಂತಹ ಸಮಯದಲ್ಲಿ ಅದರ ಗೌರವದ ಬಗ್ಗೆ ತರ್ಕಿಸುವುದು ತರವಲ್ಲ. ಹತ್ತೂಜನರಂತೆ ಮುಜರೆ ಒಪ್ಪಿಸುವುದೇ ಲೇಸು.

ಇಂತಹ ಟೋಪಿಗೆ ಮಣಿಯದವರೇ ಇಲ್ಲ. ಇಂದಲ್ಲವಾದರೂ ತಮ್ಮ ನೆನ್ನಿನ ದಿನಗಳಲ್ಲಿ ಟೋಪಿಗಾಗಿ ಕಾದಾಡಿದವರೆಷ್ಟು ಮಂದಿ? ಇಂದು ತಮ್ಮ ಹಿಂದಿನ ಅನುಭವಗಳನ್ನು ಮೆಲಕುಹಾಕುವುದಕ್ಕೆ ಅವಮಾನವೇನೋ? ಅಥವಾ ನಾಚಿಕೆಯೋ? ಅದಂತಿರಲಿ. ಇಂತಹ ಟೋಪಿಗೆ ಪ್ರಾಮುಖ್ಯತೆ ಕೊಟ್ಟವರಲ್ಲಿ ಜಗತ್ಪ್ರಸಿದ್ಧರಾದ ಮಹಾತ್ಮ ಗಾಂಧಿಯೂ ಒಬ್ಬರು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಶಾಂತಿ, ಸತ್ಯ, ಅಹಿಂಸೆಗಳು ಅವರ ಅಸ್ತ್ರವಾದರೆ 'ಗಾಂಧಿ ಟೋಪಿ' ಅವರ ಶಸ್ತ್ರವಾಯಿತು. ಒಮ್ಮೆ ಪರದೇಶೀ ಟೋಪಿಗಳನ್ನು ಧರಿಸುತ್ತಿದ್ದವರ ಟೋಪಿಗಳನ್ನೆಲ್ಲಾ ಕಿತ್ತು ಬೆಂಕಿಗೆ ಬಿಸಾಡಿ, ಬದಲಾಗಿ 'ಗಾಂಧಿ ಟೋಪಿ'ಯನ್ನು ಹಂಚಿದ ಪ್ರಸಂಗವೊಂದುಂಟು. ಅದು ನಮಗೆ ಟೋಪಿಯಲ್ಲಿ ಮೂಡಿದ್ದ ಭಕ್ತಿ, ಗೌರವಗಳನ್ನು ಎತ್ತಿ ತೋರಿಸುತ್ತದೆ. ನಮ್ಮ ಟೋಪಿ ನಮ್ಮವರಲ್ಲಿರಬೇಕೆಂದು ಸೂಚಿಸಿದ ಈ ಪ್ರಸಂಗ ಮಹತ್ವದ್ದೇ ಸರಿ. ಅಂದಿನಿಂದ ಕೆಲವು ವರ್ಷಗಳು ನಮ್ಮವರಿಗೆ ಟೋಪಿಯಲ್ಲಿ ಆದರ ಉಂಟಾಯಿತು. ಮೇಲಾಗಿ, ಗಾಂಧೀಜಿಯವರು ಎಲ್ಲರನ್ನೂ ಟೋಪಿ ಧರಿಸಬೇಕೆಂದು ಪ್ರಾರ್ಥಿಸಿದರು. ಅದರ ರೂಪ ಪ್ರಾರ್ಥನೆಯಂತಿದ್ದಿತಾದರೂ ಪ್ರೇರಣೆಯ ಕಾರ್ಯವನ್ನು ಸಾಧಿಸಿತು. ಅಂತೆಯೇ ಎಲ್ಲರೂ ಧರಿಸಿದರು. ಟೋಪಿಯಿಲ್ಲದ ಮಕ್ಕಳಿಲ್ಲ; ಟೋಪಿಯಿಲ್ಲದ ಮುದುಕರಿಲ್ಲ. ಹೀಗೆ, ಎಲ್ಲರ ತಲೆಯ ಮೇಲೂ ಟೋಪಿಯೇ ಆಯಿತು. ಇದಕ್ಕಾಗಿ ಗಾಂಧಿಜಿಯವರು ಒಂದು ಟೋಪಿ ಸೃಷ್ಟಿಸಿದರು. ಅದು 'ಗಾಂಧಿಟೋಪಿ' ಯೆನಿಸಿತು. ಅದೇ ಸ್ಥಾನದಲ್ಲಿ ಮತ್ಯಾವ ಟೋಪಿಯಿದ್ದಿದ್ದರೂ ಅದೂ ಸಹ 'ಗಾಂಧಿಟೋಪಿ' ಸಾಧಿಸಿದ ಕಾರ್ಯವನ್ನೇ ಸಾಧಿಸುತ್ತಿತ್ತು. ಹಾಗಾದರೆ 'ಗಾಂಧಿಟೋಪಿ' ಸಾಧಿಸಿದ ಕಾರ್ಯವಾವುದೆನ್ನಬಹುದು? 'ಗಾಂಧಿಟೋಪಿ' ಧರಿಸಿದವರೆಲ್ಲ ನಮ್ಮವರೆಂದು ಹೇಳಿಕೊಳ್ಳುವ ಒಂದು ಬಗೆಯ ಆತ್ಮೀಯತೆ ನಮ್ಮವರಲ್ಲಿ ಬೆಳೆಯಿತು. ಈ ಆತ್ಮೀಯತೆಯೇ ಮುಂದೆ ಒಗ್ಗಟ್ಟಿಗೆ ಕಾರಣವಾಯಿತು. ಈ ಒಗ್ಗಟ್ಟು ಒಂದು ರೀತಿಯ ಹುಮ್ಮಸ್ಸಿಗೆ ಹಾದಿಯಾದಂತಾಯಿತು. ಮೊದಲು ಅಸಾಧ್ಯವೆಂದರಿತಿದ್ದ ಕಾರ್ಯಗಳನ್ನೆಲ್ಲಾ ಈ ಹುಮ್ಮಸ್ಸು ಸಾಧಿಸಿತು. ಈ ಹುಮ್ಮಸ್ಸಿನ ಹಿನ್ನೆಲೆ 'ಟೋಪಿ'; ಕಾರ್ಯಸಾಧನೆಯೇ ಭಾರತದ ಸ್ವಾತಂತ್ರ್ಯ. ಈ ಕಾರ್ಯಸಾಧನೆಯಿಂದ ಲಭಿಸಬೇಕಾಗಿದ್ದ ಗೌರವ ಸಂಪೂರ್ಣವಾಗಿ ಟೋಪಿಗೆ ಸಿಕ್ಕಿತೆಂದು

ಹೇಳುವಂತಿಲ್ಲ. ಕಾರ್ಯಸಾಧನೆಯಾದ ಬಳಿಕ ಅದು ಅಪ್ರಯೋಜಕವೋ ಏನೋ ಎಂದು ಜನ ಅದನ್ನು ಮರೆತರು. ಬರಿಯ ಶಸ್ತ್ರವೊಂದನ್ನೇ ಮರೆಯಲಿಲ್ಲ. ಶಸ್ತ್ರವನ್ನು ಪ್ರಯೋಗಿಸಿದ ಮಹಾತ್ಮನನ್ನೂ ಮರೆತರು. ಮರೆಯಲ್ಪಟ್ಟ ಮಹಾ ಜೀವಗಳೆರಡೂ ಮರಣದ ದುಃಖವನ್ನು ಸವಿದವು. ಇದರಿಂದ ಜನತೆಗೆ ನಷ್ಟವಾಯಿತೇ ಹೊರತು ಟೋಪಿಗಲ್ಲ. ನಮ್ಮ ದೇಶದ ಸ್ವಾತಂತ್ರ್ಯ ಸಮರದ ಸಚ್ಚರಿತ್ರೆಯಲ್ಲಿ ಟೋಪಿ ವಹಿಸಿದ ಪಾತ್ರಕ್ಕೆ ಮತ್ತಾವ ದೇಶದ ಟೋಪಿಯ ಚರಿತ್ರೆಯೂ ಸಾಮ್ಯವಾಗಲಾರದು. ಆ ಎಲ್ಲ ದೇಶದ ಟೋಪಿಗಳ ಚರಿತ್ರೆಗಿಂತಲೂ ನಮ್ಮ ಈ ಟೋಪಿಯ ಚರಿತ್ರೆ ಬಹು ಹಿರಿದು ಮತ್ತು ಅಷ್ಟೇ ಮಹತ್ವದ್ದು. ಅದರ ಮಹತ್ವಕ್ಕೆ ಅದರಿಂದ ನಮಗೆ ಲಭಿಸಿದ ಸ್ವಾತಂತ್ರ್ಯವೇ ಸಾಕ್ಷಿ.

ಇದು ಒಂದು ಬಗೆಯಲ್ಲಿ ಟೋಪಿಯ ಪೂರ್ವೇತಿಹಾಸವೇ ಆದಹಾಗಾಯಿತು. ಇಂತಹ ಹಿನ್ನೆಲೆಯನ್ನುಳ್ಳ ಟೋಪಿಗೆ ಇಂದು ಸಿಗುತ್ತಿರುವ ಗೌರವ ಅತಿ ಕಡಮೆ ಮಟ್ಟದ್ದು. 'ಬಲ್ಲವನೇ ಬಲ್ಲ ಬೆಲ್ಲದ ಸವಿಯ' ಎಂಬಂತೆ ಟೋಪಿಯ ಪ್ರಯೋಜನ ಅರಿತವನೇ ಅರಿವ. ಅದನ್ನು ಅರಿತು, ಅದರಿಂದ ಅತ್ಯಂತ ಪ್ರಯೋಜನ ಪಡೆಯುತ್ತಿರುವವರು ಸೈನಿಕರು ಮಾತ್ರ. ಎಲ್ಲ ಟೋಪಿಗಳಂತೆ ಬಟ್ಟೆಯಿಂದ ಮಾಡಿದುದಲ್ಲ ಇದು; ಕಬ್ಬಿಣದಿಂದ ತಯಾರಿಸಲ್ಪಟ್ಟದ್ದು. ಭಾರ ಹೆಚ್ಚು ಮತ್ತು ಬೆಲೆಯೂ ಹೆಚ್ಚು; ಸಿಗುವ ಗೌರವವೂ ಅಷ್ಟೇ ಹೆಚ್ಚು. ಸೈನ್ಯದಲ್ಲಿ ಟೋಪಿಯಿಲ್ಲದವನಿಗೆ ಬೆಲೆಯಿಲ್ಲ. ಆತ ಬರಿಯ ತಲೆಯಲ್ಲಿ ಮತ್ತೊಬ್ಬನಿಗೆ 'Salute' ಸಹ ಮಾಡಕೂಡದು. ಸೈನಿಕರ ಟೋಪಿಗಳಲ್ಲಿ ನಾನಾ ವಿಧಗಳುಂಟು. ಕೆಲವಕ್ಕೆ ರೆಕ್ಕೆ ಪುಕ್ಕಗಳಿರುತ್ತವೆ, ಮತ್ತೆ ಕೆಲವಕ್ಕೆ ಮತ್ತೊಂದು ಬಗೆಯ ಅಲಂಕಾರ. ಈ ಟೋಪಿಯ ಅಲಂಕಾರ ಅವರ ಅಧಿಕಾರ ಸೂಚಿಸುವ ಒಂದು ಮಾರ್ಗ. ಅಧಿಕಾರದ ಮಝಲು ಬೆಲೆಯಾದಂತೆ ಆತ ಧರಿಸುವ ಟೋಪಿ ಮತ್ತೊಂದು ರೀತಿಯದು. ಇಲ್ಲಿ ಟೋಪಿಯ ಕಾರ್ಯ ಶ್ಲಾಘನೀಯ.

ಇದಲ್ಲದೆ ಮತ್ತೊಂದು ಬಗೆಯ ಟೋಪಿಯುಂಟು. ಅದು ನಮ್ಮ ಮುಸಲ್ಮಾನರು ಧರಿಸಿಕೊಳ್ಳುವುದು. ಅದು ಸಾದಾ ಟೋಪಿಗಿಂತ ಸ್ವಲ್ಪ ಬೆಚ್ಚಗಿರುತ್ತದೆಂದು ತೋರುತ್ತದೆ. ಆ ಬಗೆಯ ಟೋಪಿಯನ್ನು ಕೇವಲ ಅವರೇ

ಧರಿಸುವುದರಿಂದ, ಅದನ್ನು ಧರಿಸುವವನನ್ನು ನೋಡಿದ ಕೂಡಲೆ ಆತನ ಮತ ವಾವುದೆಂದು ತಿಳಿಯಬಹುದು. ಇದೊಂದು ರೀತಿಯ ಉಪಯೋಗವೇ ಸರಿ. ಮತ ತಿಳಿಯದೆಯೆ ಮಾತನಾಡುವುದರಿಂದ ಆಕಸ್ಮಿಕಗಳಾಗುವ ಸಂಭವ ವುಂಟು. ಅಂತಹ ಆಕಸ್ಮಿಕಗಳು ಆಗದಂತೆ ಮುನ್ನೆಚ್ಚರಿಕೆ ಕೊಡುವುದಲ್ಲದೆ ಮುಂಜಾಗ್ರತೆಯನ್ನೂ ಸೂಚಿಸುತ್ತದೆ, ಈ ಟೋಪಿ. ಅದರ ಈ ಕಾರ್ಯ ಎಲ್ಲರೂ ಮೆಚ್ಚಬೇಕಾದ್ದೆ! ಈ ಟೋಪಿಗಳಲ್ಲೂ ಅನೇಕ ಬಗೆಯುಂಟು. ಕೆಲವು ಟೋಪಿಗಳಿಗೆ ಒಂದು ರೀತಿಯ ಕುಚ್ಚುಂಟು. ಈ ಬಗೆಯ ಟೋಪಿಗಳು ಚೇತೋಹಾರಿ ಟೋಪಿಗಳು. ಯಾರೊಡನಾದರೂ ಮಾತನಾಡುತ್ತಿದ್ದರೆ ನಮ್ಮ ಮನಸ್ಸು, ದೃಷ್ಟಿಯೆಲ್ಲಾ ಟೋಪಿಯ ಕುಚ್ಚಿನ ಮೇಲೆಯೇ ಇರುತ್ತದೆ. ಒಮ್ಮೆ ಅತ್ತ, ಒಮ್ಮೆ ಇತ್ತ, ಒಮ್ಮೆ ಇತ್ತಿಂದತ್ತ, ಹೀಗೆ ಬಳುಕುವ ಅದು ನಮ್ಮ ದೃಷ್ಟಿಯನ್ನು ಸೆರೆಹಿಡಿಯುವುದರಲ್ಲಿ ಸಂದೇಹವಿಲ್ಲ.

ಇನ್ನೂ ಕೆಲವು ತರಹ ಟೋಪಿಗಳುಂಟು. ಅವು ಬಟ್ಟೆ, ಲೋಹ ಗಳಿಂದ ಮಾಡಿದುವಲ್ಲ. ಬರಿಯ ಗರಿಗಳಿಂದ ಮಾಡಲ್ಪಟ್ಟವು. ತಾಳೆಗರಿ ಯಿಂದ ಮಾಡಿದ ಒಂದು ಬಗೆಯ ಟೋಪಿಯನ್ನು ನಮ್ಮ ಜನ ಉಪಯೋಗಿ ಸುತ್ತಾರೆ. ಆ ಟೋಪಿಯನ್ನು ಧರಿಸಿಕೊಂಡು ಅದರ ಮೇಲೆ ರುಮಾಲನ್ನು ಕಟ್ಟುತ್ತಾರೆ. ರುಮಾಲು ಜರತಾರಿಯದಾದರೆ ಜಬರದಸ್ತೂ ಜಾಸ್ತಿ. ಆ ಟೋಪಿ ಇಲ್ಲದಿದ್ದರೆ ರುಮಾಲಿಗೆ ರೂಪ ಬರುವುದಿಲ್ಲ; ಠೀವಿ ಬರುವುದೇ ಇಲ್ಲ. ತೆರೆಯ ಹಿಂದಿರುವ ಈ ಟೋಪಿ ಇಲ್ಲದಿದ್ದರೆ ಆ ರುಮಾಲಿನ ರೂಪ ನೋಡಲಿಕ್ಕಾ ಗುವುದಿಲ್ಲ. ಅಂತಹ ರೂಪಕೊಡುವ ಕಾರ್ಯ ಟೋಪಿಯದೆಂದು ಅನೇಕರು ತಿಳಿದಿಲ್ಲ. ಇಂತಹ ಗರಿಯ ಟೋಪಿಯನ್ನು ಬರ್ಮ, ಮತ್ತಿತರ ದೇಶಗಳಲ್ಲಿಯೂ ಉಪಯೋಗಿಸುತ್ತಾರೆ. ಹೀಗೆ ಒಂದೊಂದು ದೇಶದಲ್ಲಿ ಬಳಕೆಯಿರುವ ಟೋಪಿ ಒಂದೊಂದು ಬಗೆಯದು. ಆಯಾ ಟೋಪಿಗಳಿಂದ ಆಯಾ ದೇಶದ ಜನ ಜೀವನ, ಜೀವನ ಮಟ್ಟ, ಮತ, ಧರ್ಮ, ಇತ್ಯಾದಿಗಳನ್ನು ಅರಿಯಬಹುದು.

ಇತ್ತೀಚಿನ ಟೋಪಿಗಳಲ್ಲಿ ಪ್ರಾಮುಖ್ಯತೆಗೆ ಬಂದಿರುವುವೆಂದರೆ ಮಕಮಲ್ ಟೋಪಿ, ಸಾದಾ ಟೋಪಿ ಮತ್ತು ಗಾಂಧಿ ಟೋಪಿ. ಇದರಲ್ಲಿ ಮಕಮಲ್ ತನ್ನದೇ ಆದ ಒಂದು ವಿಶಿಷ್ಟತೆಯನ್ನು ತಾಳಿದೆ. ಅದರ ಬಣ್ಣ, ಅದು ಸೂರ್ಯನ ಬೆಳಕಿಗೆ ವೈಒಡ್ಡಿದಾಗ ತಿರುಗುವ ಬಣ್ಣ, ನೋಡುವುದಕ್ಕೆ

ಬಲು ಸೊಗಸು. ಅದರ ದ್ವಿವರ್ಣ ಛಾಯೆ ಮತ್ತೂ ಸೊಗಸು. ಅದರ ಮೈ ಸವರುತ್ತಿದ್ದರೆ ಮನಸ್ಸಿಗೆ ಏನೋ ಒಂದು ಆನಂದ. ಅದರ ಈ ಗುಣವೇ ಮಕ್ಕಳನ್ನು ಅತಿಯಾಗಿ ಆಕರ್ಷಿಸುವುದು. ಚಿಕ್ಕ ಹುಡುಗರಿಗೆ ಈ ಟೋಪಿಯನ್ನು ಕಂಡರೆ ಬಲು ಪ್ರೇಮ. ಈ ಟೋಪಿಯನ್ನು ಚಿಕ್ಕಂದಿನಲ್ಲಿ ಧರಿಸದಿದ್ದವರು ಅತಿವಿರಳ. ಇವುಗಳಲ್ಲಿ ಕೆಲವಕ್ಕೆ ಕಸೂತಿ ಸಹ ಮಾಡಿರುತ್ತಾರೆ. ಅಂತಹವೂ ಚೆನ್ನು. ಬಾಲಕರನ್ನು ಬಿಟ್ಟರೆ ಇದನ್ನು ಧರಿಸುವವರು ಐಶ್ವರ್ಯವಂತರೆಂದೆನಿಸಿಕೊಂಡವರು. ಆದರೆ ನವನಾಗರಿಕತೆ ಬಂದು ಮಕಮಲ್ ಟೋಪಿ ಕ್ಷೀಣಿಸುತ್ತಿದೆ. ಅದರ ಸ್ಥಾನವನ್ನು ಸಾದಾ ಟೋಪಿ ಆಕ್ರಮಿಸುತ್ತಿದೆ. ಸಾದಾ ಟೋಪಿ ನೋಡುವುದಕ್ಕೆ ಅತಿ ಆಡಂಬರವಿಲ್ಲದ್ದು, ಮತ್ತು ಎಲ್ಲ ಬಣ್ಣಗಳಲ್ಲೂ ಸಿಕ್ಕತಕ್ಕದ್ದು. ಆದರೆ ಇದರಲ್ಲಿ ಹೆಚ್ಚು ಬಳಕೆಯಲ್ಲಿರುವುದು ಕಪ್ಪು ಬಣ್ಣದ್ದು. ಈ ಬಗೆಯ ಟೋಪಿಯನ್ನು ಸಾಮಾನ್ಯವಾಗಿ ವ್ಯಾಪಾರಸ್ಥರು, ಪ್ರೈಮರಿ ಸ್ಕೂಲ್ ಉಪಾಧ್ಯಾಯರು, ಗುಮಾಸ್ತರು ಮತ್ತು ಪೈಲ್ವಾನರು ಉಪಯೋಗಿಸುತ್ತಾರೆ. ಇವರೆಲ್ಲರೂ ಒಂದೇ ಬಗೆಯ ಟೋಪಿಯನ್ನು ಧರಿಸಿದರೂ ಅದನ್ನು ಧರಿಸುವ ರೀತಿಯಲ್ಲಿ ವೈವಿಧ್ಯವುಂಟು. ಅದನ್ನು ಧರಿಸುವ ರೀತಿ ಅವರ ವೃತ್ತಿಯನ್ನವಲಂಬಿಸಿರುತ್ತದೆಂದು ತೋರುತ್ತದೆ. ಪೈಲ್ವಾನರು ಅದನ್ನು ಸ್ವಲ್ಪ ಎಡಕ್ಕೆ ವಾಲಿಸಿ, ಸ್ವಲ್ಪ ಜಬರದಸ್ತಿನಿಂದ ಕುಳ್ಳಿರಿಸಿರುತ್ತಾರೆ. ಗುಮಾಸ್ತೆ ಮತ್ತು ಉಪಾಧ್ಯಾಯರ ಶಿರಸ್ಸನ್ನಲಂಕರಿಸುವ ಇದೇ ಟೋಪಿಯು ಇವರ ವೃತ್ತಿಯಷ್ಟೇ ನೀರಸ. ಯಾರ ಮಾತನ್ನಾದರೂ ಸರಿಯೆ, ಶಿರಸಾವಹಿಸಿ ಮಾಡುತ್ತೇನೆನ್ನುವ ದೈನ್ಯತೆಯಿಂದ ಕುಳಿತಿರುವಂತೆ ಕಾಣುತ್ತದೆ. ಇವರ ವಿಷಯದಲ್ಲಿ ಮಾತ್ರ ಟೋಪಿಯಲ್ಲಿ ಯಾವ ಮಾರ್ಪಾಡು ಮಾಡಲೂ ಅಶಕ್ಯ. ಇವರ ತಲೆಯ ಮೇಲಿದ್ದಾಗ, ಟೋಪಿ ತನ್ನ ಆತ್ಮಗೌರವವನ್ನೇ ಕಳೆದುಕೊಂಡಿದ್ದಂತೆ ಕಾಣುತ್ತದೆ. ಬಣ್ಣ ಬದಲಾಯಿಸಿದ, ಎಣ್ಣೆಗಟ್ಟಿದ, ಅಷ್ಟಾಕೃತಿಯನ್ನು ತಾಳಿರುವ, ಅಲ್ಲಲ್ಲಿ ದೇಹ ಕಿತ್ತುಬಂದಿರುವ ಆ ದೃಶ್ಯ ರುದ್ರಯಾತನೆಯನ್ನುಂಟುಮಾಡುತ್ತದೆ, ನೋಡುವವನ ಹೃದಯದಲ್ಲಿ. ಅವನ ಮನಸ್ಸು ಸಂತಾಪ ಪಡುತ್ತದೆ; ಅಲ್ಲಿ ಕನಿಕರ ಮೂಡುತ್ತದೆ. ಮರುಕ್ಷಣವೇ, ಆತನ ಟೋಪಿಯನ್ನು ಕಿತ್ತೊಗೆದು ಬೇರೊಂದನ್ನು ಕೊಡಿಸಲೇ ಎಂದೆನ್ನಿಸುತ್ತದೆ. ಹೀಗೆ ಮನಸ್ಸು ಇನ್ನೂ ತುಯ್ಯಲಾಟದಲ್ಲಿರುವಾಗಲೇ ಆತನನ್ನು ದಾಟಿ

ಮುಂದೆ ಹೋಗುವುದರಿಂದ ದೃಶ್ಯ ಬದಲಾಯಿಸುತ್ತದೆ. ಮನಸ್ಸಿನಲ್ಲಿ ಮೂಡಿದ್ದ ಕಾರ್ಗತ್ತಲೆ ಹರಿದು ಬೆಳಕು ಬೆಳಗುತ್ತದೆ. ಹೃದಯ ಹಗುರವಾಗುತ್ತದೆ; ಮನಸ್ಸು ಎಂದಿನಂತಾಗುತ್ತದೆ. ಇನ್ನು ವರ್ತಕರು ಧರಿಸುವ ಟೋಪಿಯ ಬಗ್ಗೆ ಹೇಳುವುದೆಂದರೆ ಅವರು ಧರಿಸುವ ರೀತಿಯೇ ಬೇರೊಂದು ಬಗೆ ಎಂದೆನ್ನ ಬಹುದು. ಅವರ ಎರಡು ಕಣ್ಣುಗಳನ್ನೂ ತಕ್ಕಡಿಯ ಎರಡು ತಟ್ಟೆಗಳೆಂದು ಭಾವಿಸಿಕೊಂಡರೆ, ಟೋಪಿಯ ಒಂದು ಮೂಲೆ ತಕ್ಕಡಿಯ ಮಧ್ಯದ ಮುಳ್ಳಿನ ಸ್ಥಾನವನ್ನು ಆಕ್ರಮಿಸಿಕೊಂಡಿರುತ್ತದೆ. ಅಂದರೆ, ಆ ಮೂಲೆ ಮೂಗಿನ ಮಧ್ಯಕ್ಕೆ ನೇರವಾಗಿರುತ್ತದೆ. ಕೆಲವರ ಟೋಪಿ ಮುಂದಲೆಯನ್ನೆಲ್ಲಾ ಮುಚ್ಚಿ ಕೊಂಡು ಮೂಗಿನ ಬಳಿ ಬಂದು ಕುಳಿತಿರುತ್ತದೆ. ಮತ್ತೆ ಕೆಲವರದು ಮುಂದಿನ ಕೆಲವು ಕೂದಲುಗಳನ್ನು ಗಾಳಿಗೆ ಹಾರಾಡಲು ಬಿಟ್ಟು ಹಿಂದೆ ಕೂತಿರುತ್ತದೆ. ಅದು ಅವರವರ ಇಚ್ಛೆಯ ಪ್ರಕಾರ. "ಲೋಕೋ ಭಿನ್ನರುಚಿಃ"

ಏತನ್ಮಧ್ಯೆ, ಮೇಲೆ ಹೇಳಿದ ಎರಡು ಬಗೆಯ ಟೋಪಿಗಳನ್ನು ಮೂಲೆ ಗೊತ್ತಿರಿಸಿ ಇಡೀ ದೇಶದಲ್ಲಿ ಏಕಾಏಕಿ ಏಕಕಾಲದಲ್ಲಿ ಪ್ರಾಮುಖ್ಯತೆಗೆ ಬಂದು ಬಡವ, ಬಲ್ಲಿದ, ಹುಡುಗ, ಮುದುಕ ಎಂಬ ಭೇದವಿಲ್ಲದೆ ಎಲ್ಲರ ತಲೆ ಯನ್ನೂ ಅಲಂಕರಿಸಿದುದು 'ಗಾಂಧಿಟೋಪಿ.' ಅದರ ಈ ಜಯಕ್ಕೆ ಸ್ಥಿರ ಪ್ರಯತ್ನ, ಚಾತುರ್ಯ ಮತ್ತು ತಾಳ್ಮೆಗಳೇ ಅಡಿಗಲ್ಲು. ಈ ಟೋಪಿಯ ಜಯಕ್ಕೆ ಮತ್ತೊಂದು ಕಾರಣ: ಮತಭೇದವಿಲ್ಲದುದು. ಯಾವ ಮತದವನಾ ದರೂ ಇದನ್ನು ಧರಿಸಬಹುದು. ಇದರ ಬಣ್ಣ ಬಿಳಿಯದಾದುದರಿಂದ, ವಿಜ್ಞಾನ ದೃಷ್ಟಿಯಿಂದಲೂ ಇದು ಧರಿಸುವುದಕ್ಕೆ ಯೋಗ್ಯವಾದುದು. ಇಂತಹ ಉದಾತ್ತ ಭಾವನೆಗಳುಳ್ಳ ಈ ಟೋಪಿಯನ್ನು ಜಯಲಕ್ಷ್ಮಿ ಕೈಹಿಡಿದುದರಲ್ಲಿ ಸೋಜಿಗ ವೇನೂ ಇಲ್ಲ. ಆದರೆ ಇಂದು ಕೆಲವು ಸ್ವಾರ್ಥಿಗಳಿಂದ ಈ ಟೋಪಿಯ ಗೌರವ, ಘನತೆಗಳಿಗೆ ಕುಂದುಂಟಾಗುತ್ತಿದೆ. ಅದನ್ನು ಮೊಳಕೆಯಲ್ಲೇ ಚಿವುಟಿದರೆ ಉತ್ತಮ. ಇಲ್ಲವಾದರೆ ಮುಂದೆ ಆಘಾತಗಳು ಬಹಳ.

ಟೋಪಿಯಿಂದ ಮಾನವನಿಗೆ ಆಗುತ್ತಿರುವ ಪ್ರಯೋಜನ ಅದರ ಮಟ್ಟಕ್ಕೆ ಮೀರಿದ್ದು. ಅದು ಸಲ್ಲಿಸುತ್ತಿರುವ ಸೇವೆ ಸ್ನೇಹಭಾವದಿಂದಲೇ ವಿನಾ ಸೇವಕ ನಂತಲ್ಲ. ಅದು ಯಾವ ಟೋಪಿಯೇ ಆಗಿರಲಿ, ಯಾವ ದೇಶದ್ದೇ ಆಗಿರಲಿ, ಅದರ ಸೇವೆ ಅಮೋಘವಾದದ್ದು. ಉದಾಹರಣೆಗೆ: ನಮ್ಮ ತಲೆ ಕೆದರಿರ

ಬಹುದು, ತಲೆ ಬಾಚಿಕೊಳ್ಳುವುದಕ್ಕೆ ಸೋಮಾರಿತನವಿರಬಹುದು; ಹೊರಗೆ ನಮ್ಮನ್ನು ನೋಡಲು ಯಾರೋ ಕಾದಿದ್ದಾರೆ. ಇಂತಹ ಸಮಯದಲ್ಲಿ "ಆಪತ್ಕಾಲಕ್ಕಾದವನೇ ನೆಂಟ" ಎಂಬಂತೆ ಟೋಪಿ ಬಂದು ನಮ್ಮ ತಲೆಯನ್ನೇರುತ್ತದೆ, ನಮ್ಮ ಮಾನವನ್ನು ಕಾಪಾಡುತ್ತದೆ. ಮತ್ತೆ, ನಮ್ಮ ತಲೆಯಲ್ಲಿ ಎಣ್ಣೆಯಿಲ್ಲದೆ "ಗೊರವಯ್ಯ"ನಂತೆ ಕಾಣುತ್ತಿರಬಹುದು. ಅದನ್ನು ನೋಡಿದ ಮಕ್ಕಳು ತಾಯಿತಿ ಕಟ್ಟಿಸಿಕೊಳ್ಳಬೇಕಾಗಬಹುದು. ಅಂತಹ ಸಮಯದಲ್ಲಿ ಸಹಾಯಕ್ಕೆ ಬರುವುದು ಈ ಟೋಪಿಯೇ. ಹರಕು ಷರಟನ್ನು ಮುಚ್ಚಿ ಮಾನ ಕಾಪಾಡುವ ಕೋಟಿನಂತೆ, ನಮ್ಮ ಕರಿ-ಬಿಳಿ ಕೂದಲುಗಳನ್ನು ಮುಚ್ಚಿ ಚಿಕ್ಕಂದಿನಲ್ಲಿಯೇ ನಮಗೆ ಬಂದಿರುವ ಮುದಿತನವನ್ನು ತೋರ್ಪಡಿಸದಿರುವುದಕ್ಕೆ ಸಹಾಯಕವಾಗುವುದು. ಜುಟ್ಟು ಬಿಟ್ಟುಕೊಳ್ಳುವುದು ಅವಮಾನವೆಂದಿರುವ ಈ ಕಾಲದಲ್ಲಿ ನಮ್ಮ ಜುಟ್ಟನ್ನು ತನ್ನ ಮಡಿಲಲ್ಲಿ ಮುಚ್ಚಿಟ್ಟುಕೊಂಡು ನಮ್ಮನ್ನು ಅಪಹಾಸ್ಯಕ್ಕೀಡುಮಾಡದಿರುವುದೂ ಈ ಟೋಪಿಯೇ. ನೆರೆ ಊರಿನ ನರಸಯ್ಯನವರು ಬಡ್ಡಿ ದುಡ್ಡಿನಲ್ಲಿ ಬಾವಿ ಕಟ್ಟಿಸಿ "ಲೋಕಸೇವಾ ನಿರತ"ರೆಂಬ ಬಿರುದನ್ನು ಪಡೆದರು. ಆದರೆ ಅನವರತವೂ ಲೋಕಸೇವೆಯಲ್ಲೇ ನಿರತವಾಗಿರುವ ಈ ಟೋಪಿಗೆ—ಹೋಗಲಿ, ಬಿರುದು ಬೇಡವೆಂದರೆ—ಸಿಕ್ಕುತ್ತಿರುವ ಗೌರವವೂ ಅಷ್ಟಕ್ಕಷ್ಟೆ. ಪ್ರತಿಫಲಾಪೇಕ್ಷೆಯಿಲ್ಲದೆ ತಾಳ್ಮೆಯಿಂದ ಸಲ್ಲಿಸುತ್ತಿರುವ ಅದರ ಸೇವೆ ಮಾನವನಿಗೊಂದು ಸವಾಲು. ಆ ಸವಾಲಿಗೆ ಪ್ರತಿ ಸವಾಲು ಹಾಕಲು ಇಂದಿನವರೆಗೂ ಯಾರೂ ಮುಂದೆ ಬಂದಿಲ್ಲ. ಅದರಿಂದ ಮಾನವನಲ್ಲಿ ಟೋಪಿಗಿರುವ ಕೆಲವು ಗುಣಗಳು ಸಹ ಇಲ್ಲವೆಂದು ಧಾರಾಳವಾಗಿ ತಿಳಿಯಬಹುದು.

ತನ್ನ ವಿಚಾರವನ್ನು ತಾನೇ ಹೇಳಿಕೊಳ್ಳುವುದು ಗಂಭೀರವೆನಿಸಲಾರದು. ಆದರೂ ಹೇಳಲೆಬೇಕಾದ ಪ್ರಸಂಗ ಒದಗಿದೆ. ಹೇಳಿಬಿಡುತ್ತೇನೆ. ನಿಜವಾಗಿಯೂ, ನಾನು ಟೋಪಿಯ ಪಕ್ಷಪಾತಿ. ಬೆಳಗಿನ ಜಾವ ಎಂಟಕ್ಕೆ ಎದ್ದೊಡನೆಯೇ ನನ್ನ ಹಿಂಬಾಗದ ಗೋಡೆಯನ್ನಲಂಕರಿಸಿರುವ ದೇವರಿಗೆ ಕೈಮುಗಿದು ನನ್ನ ಇಷ್ಟಗಳನ್ನು ಈಡೇರಿಸೆಂದು ಬಹು ದೈನ್ಯದಿಂದ ಪ್ರಾರ್ಥಿಸಿಕೊಳ್ಳುತ್ತೇನೆ. ನನ್ನ ಇಷ್ಟಗಳನ್ನು ತಿಳಿಯಬೇಕೆಂದು ನಿಮಗೆ ಕಾತರವಿರುವಂತಿದೆ. ನನಗೋ ಹೇಳಲು ಇಚ್ಛೆಯಿಲ್ಲ. ಆದರೆ ನಾನು ಮೊದಲೇ

ಹೇಳಿದಂತೆ ನಾನು ಟೋಪಿಯ ಪಕ್ಷಪಾತಿಯಾದುದರಿಂದಲೂ, ನನ್ನ ಇಚ್ಛೆಗಳು ಟೋಪಿಗೆ ಸಂಬಂಧಿಸಿದುದರಿಂದಲೂ, ಟೋಪಿಯು ಅಭ್ಯುದಯಕ್ಕೆ ಏನೆಲ್ಲ ಕಾರ್ಯಗಳನ್ನಾದರೂ ಮಾಡುತ್ತೇನೆಂದು ಹಟ ತೊಟ್ಟಿರುವುದರಿಂದಲೂ ಹೇಳಲೇಬೇಕಾಗಿದೆ. ನಾನು ದೇವರಿಗೆ ನಮಸ್ಕರಿಸಿದನಂತರ ದೇವರಲ್ಲಿ ನನ್ನೆರಡು ಅಭೀಷ್ಟಗಳನ್ನು ನೆರವೇರಿಸೆಂದು ಮೊರೆಯಿಡುತ್ತೇನೆ. ಅದರಲ್ಲಿ ಮೊದಲನೆಯದು—ಪ್ರಪಂಚದಲ್ಲಿ ಪ್ರತಿಯೊಬ್ಬನೂ ಟೋಪಿ ಧರಿಸುವಂತಾಗಲೆಂದು; ಮತ್ತು ಎರಡನೆಯದು—ಯಾರೂ ಮತ್ತೊಬ್ಬರಿಗೆ "ಟೋಪಿ ಹಾಕದಿರಲೆಂದು."

ನೀವಾದರೂ ಏನು ಮಾಡುವಿರಿ?

—ಎಸ್. ಸುಬ್ರಹ್ಮಣ್ಯಂ.

## ಕವಿ-ಕಾವ್ಯ-ಬಿರುದು

ತೊಳತೊಳಗೆ ದಿಗಂಬರಮಂ |
ಬೆಳಗುವ ರುಚಿಯಿರ್ದುಮೇನೊ ಸಕಲಜನಾಂತ ||
ಸ್ಸ್ಥಳತಮುಮಂ ತಮ್ಮುದಯದೊ |
ಳಳರಿಸಿದರೆ ರವಿಗಳೆಮಗೆ ಕವಿಗಳೆ ವಂದ್ಯರ್ ||

ಚತುರ ಕವಿಯಾದವಂ ಸ |
ತ್ಕೃತಿವೇಳ್ವುದು ತನಗಮಿತರಜನಕಂ ಸುಮನ ||
ಸ್ಸ್ಥಿತಿ ವಾಸನೆವಡೆದಿರೆ ಸ |
ನ್ನುತಮಾಲೆಯನೆತ್ತುವಂತೆ ಮಾಲಾಕಾರಂ ||

ನೆರೆಯರಿಯದ ಪೊರೆಯರಿಯದ |
ಬಿರುದುಗಳೇಕೆಮಗೆ ಕೃತಿಯನೀಕ್ಷಿಸಿ ಮಿಗೆ ಮ ||
ಚ್ಚರಿಸುವ ಕವಿಯೆರ್ದೆ ಬಿಕ್ಕನೆ |
ಬಿರಿದಿರ್ದುದೆ ಬಿರುದು ಮಿಕ್ಕ ಬಿರುದುಂ ಬಿರುದೇ ||

ಬಿ. ಬಿ. ಡಿ. ಪವರ್ ಪ್ರೆಸ್ಸಿನಲ್ಲಿ ಮುದ್ರಿತವಾಯಿತು.

ಬೆಂಗಳೂರು ಸೆಂಟ್ರಲ್ ಕಾಲೇಜ್

# ಕರ್ಣಾಟಕ ಸಂಘದ ಪ್ರಕಟನೆಗಳು

---

**೧. ಶ್ರೀ ಕೈಲಾಸಂ ಅವರ ಸ್ಮರಣೆ** ರೂ. ೨/೪

ಶ್ರೀ ಕೆ. ವಿ. ಅಯ್ಯರ್ ಬರೆದದ್ದು. ಕೈಲಾಸಂ ಅವರ ಚೈತನ್ಯದ ಲೀಲೆಗಳನ್ನು ಚಿತ್ರಿಸಿರುವ ಪುಸ್ತಕ. ಶ್ರೀ ಡಿ. ವಿ. ಜಿ. ಅವರ ಮುನ್ನುಡಿಯೊಡನೆ.

**೨. ಕರ್ಣಾಟಕ ಮಾಲವಿಕಾಗ್ನಿಮಿತ್ರ ನಾಟಕಂ** ರೂ. ೧/೧೨

ಆಸ್ಥಾನ ವಿದ್ವಾನ್ ಮೋ. ಶಂ. ಸುಬ್ರಹ್ಮಣ್ಯ ಶಾಸ್ತ್ರಿಗಳ ಅನುವಾದ.

**೩. ಮೊನ್ನ ವನ್ನ** (ಮೂರು ಅಂಕಗಳ ನಾಟಕ) ರೂ. ೨/-

ಬೆಲ್ಜಿಯಂ ದೇಶದ ಮಾರಿಸ್ ಮ್ಯಾಟರ್‌ಲಿಂಕ್ ಮಹಾಕವಿಯ ನಾಟಕದ ಅನುವಾದ. ಶ್ರೀ ಎಸ್. ಜಿ. ಶಾಸ್ತ್ರೀ ಅವರು ಮಾಡಿದ್ದು.

**೪. ನಾಗನ ಪದಗಳು** ರೂ. ೧/೪

ಶ್ರೀ ಜಿ. ಪಿ. ರಾಜರತ್ನಂ ಬರೆದವು. 'ರತ್ನನ ಪದಗಳು' ಜಾತಿಯವು.

**೫. ಬಾಲ ಸರಸ್ವತಿ** (೩೬ ಬೇರೆ ಬೇರೆ ಕೃತಿಗಳು) ರೂ. ೨/೮

ಸೆಂಟ್ರಲ್ ಕಾಲೇಜ್ ಕರ್ಣಾಟಕ ಸಂಘದ ಸದಸ್ಯರಿಂದ.

**೬. ನಮ್ಮ ನಮ್ಮವರು** (೬೬ ಬೇರೆ ಬೇರೆ ಕೃತಿಗಳು) ರೂ. ೨/೮

ಮೈಸೂರು ವಿಶ್ವವಿದ್ಯಾನಿಲಯದ ಇಂಟರ್ ವಿದ್ಯಾರ್ಥಿಗಳಿಂದ.

**೭. ಚಿನ್ನದ ದೋಸೆ ಮತ್ತು ಇತರ ಕಥೆಗಳು** ಹನ್ನೆರಡಾಣೆ

ಸಂಘದ ಸದಸ್ಯರು ಸಂಗ್ರಹಿಸಿದ ಎಂಟು ಜಾನಪದ ಕಥೆಗಳು.

**೮. ಶಕ್ತಿ** (ಸಚಿತ್ರ) ರೂ. ೩/-

ವಿಜ್ಞಾನ ಗ್ರಂಥ. ಶ್ರೀ ಆರ್. ಎಲ್. ನರಸಿಂಹಯ್ಯ ಅವರಿಂದ. ವಿವರಣೆಯ ಪಟಗಳು, ಚಿತ್ರಗಳು. ವಿಸ್ತಾರವಾದ ಪರಿಭಾಷಾಕೋಶ.

---

**ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜ್, ಬೆಂಗಳೂರು**